# ಕಾಮ್ರೇಡ್ ಮಾನವೇಂದ್ರನಾಥ ರಾಯರು



ಕೇವಲ ಹಿಂದುಸ್ಥಾನದಲ್ಲಷ್ಟೇ ಅಲ್ಲ ಆದರೆ ಇಡೀ ಜಗತ್ತಿನಲ್ಲ ಪ್ರಸಿದ್ಧಿಯನ್ನು ಹೊಂದಿದ ಸುಪ್ರಸಿದ್ಧ ಹಿಂದೀ ಕಮ್ಯೂನಿಸ್ಟ ಮುಖಂಡ ರಾದ ಕಾಮ್ರೇಡ್ ಎಂ. ಎನ್. ರಾಯ ಇವರು ಕನ್ನಡಿಗರ ಸುದೈವ ದಿಂದ ಈಗ ಕರ್ನಾಟಕದ ಜನತೆಗೆ ತಮ್ಮ ದರ್ಶನವನ್ನೀಯುತ್ತಿರು ವರು. ಆದರೆ ಕನ್ನಡಿಗರಿಗೆ ಈ ಮಹಾಪುರುಷನ ಅದ್ಭುತರಮ್ಯ ಹಾಗೂ ಅತ್ಯಂತ ಚಮತ್ಕೃತಿಪೂರ್ಣವಾದ ಜೀವನ ಕಥೆಯ ಪರಿ ಚಯವು ಇರುವದಿಲ್ಲ. ಆದ್ದರಿಂದ ನಾವು ಈ ಚಿಕ್ಕ ಪುಸ್ತಕದಲ್ಲ ಕಾಮ್ರೇಡ್ ಮಾನವೇಂದ್ರನಾಥರಾಯರವರ ಸಂಕ್ಷಿಪ್ತ ಪರಿಚಯ ವನ್ನು ಪ್ರಸಿದ್ಧಿಸುವ ಸಂಧಿಯನ್ನು ಪಡೆದಿದ್ದೇವೆ.

ಕಾಂ. ರಾಯ ಇವರ ಪೂರ್ವಾಯುಷ್ಯದ ಬಗ್ಗೆ ತೀರ ಕಡಿಮೆ ಮಾಹಿತಿಯು ಉಪಲಬ್ಧವಿರುವದು. ಅಲ್ಲದೆ ಅವರು ತಮ್ಮ ಧ್ಯೇಯ ದೊಡನೆ ಸಂಪೂರ್ಣವಾಗಿ ಸಮರಸವಾಗಿದ್ದರಿಂದ ತಮ್ಮ ವ್ಯಕ್ತಿಗತ ಜೀವನದ ಬಗ್ಗೆ ಅವರ ಮನಸ್ಸಿನಲ್ಲಿ ಜೀವನ್ಮುಕ್ತ ಯೋಗಿಯಂತೆ ಅನಾಸ್ಥೆಯುಂಟಾಗಿರುವದು. ಅವರ ಮೇಲಿನ ಖಟ್ಲೆಯು ನಡೆದ ಕಾಲಕ್ಕೆ ಅವರಿಗೆ ಓರ್ವ ಮಿತ್ರನು ಅವರಿಗೆ ತಮ್ಮ ಆತ್ಮ ಚರಿತ್ರೆಯ ನ್ನು ಬರೆಯುವದಕ್ಕಾಗಿ ಸೂಚಿಸಿದ್ದನು. ಆದರೆ ಕಾಂ. ರಾಯರವರು ತಮ್ಮ ಆ ಮಿತ್ರನಿಗೆ "ನನ್ನ ಕಾರ್ಯಕ್ರಮವನ್ನು ಜನತೆಯ ಮುಂದೆ ಇಟ್ಟಿರುತ್ತದೆ. ಅದರಲ್ಲಿಯೇ ನನ್ನ ಜೀವನದ ರಹಸ್ಯವು ಸಮಾವಿಷ್ಟವಾ ಗಿದೆ" ಎಂದು ಶಾಂತರೀತಿಯಿಂದ ಉತ್ತರವನ್ನಿತ್ತರು. ಇಂಥ ನಿರಹಂ ಕಾರವೃತ್ತಿಯಿಂದಲೇ ಕಾಂ. ರಾಯರವರ ಪೂರ್ವಾಯುಷ್ಯವು ಈವರೆಗೆ ಪ್ರಕಾಶದಲ್ಲಿ ಬಂದಿರುವದಿಲ್ಲ. ಆದರೆ ಅವರ ಕರ್ತೃತ್ವ ಪೂರ್ಣಜೀವ ನದ ಉಜ್ವಲವಾದ ಪ್ರಭೆಯಿಂದ ಅವರ ಈ ಅಜ್ಞಾತವಾಗಿರುವ

ಪೂರ್ವಾಯುಷ್ಯದ ಮೇಲೆಯೂ ಪ್ರಕಾಶ ಬೀಳದೆ ಇರುವದಿಲ್ಲ. ಅವರ ಆಯುಷ್ಯದ ಪ್ರಥಮ ಉಲ್ಲೇಖವು ಸರಕಾರೀ ವರದಿ (ಪರ ದೇಶಕ್ಕೆ ಹೋಗುವ ಮುಂಚಿತವೇ) ಗಳಲ್ಲಿಯೇ ಕಂಡು ಬರುತ್ತದೆ. ಮತ್ತು ನರೇಂದ್ರ ಭಟ್ಟಾಚಾರ್ಯ(ಕಾಂ. ರಾಯರ ಮೊದಲಿನ ಹೆಸರು) ಇವರು ತಮ್ಮ ಕೌಮಾರ್ಯದಲ್ಲಿಯೇ ಬಂಗಾಲದಲ್ಲಿ ಎಷ್ಟು ಗಡಿ ಬಿಡಿಯನ್ನೆಬ್ಬಿಸಿ ಬಿಟ್ಟಿದ್ದರೆಂಬುದರ ಕಲ್ಪನೆಯು ಬರುತ್ತದೆ. ಈ ವರೆಗೆ ಉಪಲಬ್ಧವಾಗಿರುವ ಅವರ ಸಂಕ್ಷಿಪ್ತವಾದ ಜೀವನ ಕಥೆ ಯನ್ನು ನಾವು ಈ ಕೆಳಗೆ ಕೊಟ್ಟಿರುವೆವು.

ಸುಮಾರು ೪೫ ವರ್ಷಗಳ ಹಿಂದೆ ಕಲಕತ್ತೆಯ ದಕ್ಷಿಣಕ್ಕೆ ೭ ಮೈಲು ದೂರದಲ್ಲಿರುವ ಚಂಗ್ರೀಪೋಲಾ ಎಂಬ ಹಳ್ಳಿಯಲ್ಲಿರುವ ಒಂದು ಬಡ ಕುಟುಂಬದಲ್ಲಿ ಕಾಮ್ರೆಡ್ ರಾಯ ಇವರ ಜನ್ಮವಾಯಿ ತು. ಅವರ ನಿಜವಾದ ಹೆಸರು ನರೇಂದ್ರ ಭಟ್ಟಾಚಾರ್ಯರೆಂದು ಇರುವದು. ಆದರೆ ತಮ್ಮ ರೋಮಹರ್ಷಕವಾದ ಜೀವನದಲ್ಲಿ ಮಾಡ ಬೇಕಾದ ಅನೇಕ ತರದ ರಾಜನೈತಿಕ ಕಾರಸ್ಥಾನಗಳ ಮೂಲಕ ಕಾಂ. ರಾಯರವರಿಗೆ ಆಗಾಗ್ಗೆ ತಮ್ಮ ಹೆಸರುಗಳನ್ನು ಬದಲು ಮಾಡ ಬೇಕಾಗಿದ್ದು ಮೆಕ್ಸಿಕೋದಲ್ಲಿ ಹೋದ ಬಳಿಕ ಅವರು ಸ್ವೀಕರಿಸಿದ ಮಾನವೇಂದ್ರನಾಥರಾಯರೆಂಬ ಹೆಸರೇ ಈಗ ತ್ರಿಖಂಡಗಳಲ್ಲಿಯೂ ಸುವಿಖ್ಯಾತವಾಗಿರುವದು. ೧೯೦೬ರಲ್ಲಿ ಬಂಗಾಲವನ್ನು ವಿಭಾಗಿಸಿದ ಹೊತ್ತಿನಲ್ಲಿ ಉದ್ಭವಿಸಿದ ಪ್ರಚಂಡ ಆಂದೋಲನದಲ್ಲಿ ಶ್ರೀ. ರಾಯರು ಒಂದು ದರೋಡೆಯ ಖಟ್ಲೆಯಲ್ಲಿ ಸಿಕ್ಕಿದ್ದರು. ಆ ಖಟ್ಲೆಯಲ್ಲಿ ನಿರ್ದೋಷಿಗಳಾಗಿ ಬಿಡುಗಡೆ ಹೊಂದಿದ ಬಳಿಕ ೧೯೧೦ರಲ್ಲಿ ಹೌರಾ ಪಟ್ಟಣದಲ್ಲಾದ ದರೋಡೆಯ ಮತ್ತು ಒಳಸಂಚಿನ ಖಟ್ಲೆಯಲ್ಲಿ ಆರೋಪಿಗಳಾಗಿದ್ದರು. ಈ ಖಟ್ಲೆಯನ್ನೂ ಸರಕಾರದವರು ತಿರಿಗಿ ತೆಗೆದುಕೊಂಡರು. ಖಟ್ಲೆಗಳ ಕೆಲಸವು ಮುಗಿದಿದ್ದರೂ ಪೋಲಿಸರು ರಾಯರನ್ನು ಪರಿಪರಿಯಿಂದ ಪೀಡಿಸುತ್ತಿದ್ದರು. ೧೯೧೪ರಲ್ಲಿ ಗಾರ್ಡನ್ ರೀಚ್ ಎಂಬ ದರೋಡೆಯ ಖಟ್ಲೆಯಲ್ಲಿ ರಾಯರನ್ನು ಮತ್ತೆ

ಹಿಡಿದರು. ಮುಂದೆ ರಾಯರು ಒಂದು ಸಾವಿರ ರೂಪಾಯಿಗಳ ಜಾಮೀನಿನ ಮೇಲೆ ಬಿಡುಗಡೆ ಹೊಂದಿದರು.

ಕಾಂ. ರಾಯ ಇವರು ಬಾಲ್ಯದಿಂದಲೇ ತಮ್ಮ ಅಗಾಧವಾದ ಬುದ್ಧಿಮತ್ತೆಯ ಹಾಗೂ ಸಾಹಸೀತನದ ಬಗ್ಗೆ ಪ್ರಸಿದ್ಧರಾಗಿದ್ದರು. ತೀರ ಕೋಮಲ ವಯಸ್ಸಿನಲ್ಲಿಯೇ ಅಂದರೆ ಪಾಟೀಗಂಟು ತಕ್ಕೊಂಡು ಪಾಠಶಾಲೆಗೆ ಹೋಗುವ ವಯಸ್ಸಿನಲ್ಲಿಯೇ ಅವರು ಒಂದು ಕೈಯಲ್ಲಿ ಭಗವದ್ಗೀತೆ ಮತ್ತು ಇನ್ನೊಂದು ಕೈಯಲ್ಲಿ ರಿವ್ಹಾಲ್ವರವನ್ನು ತಕ್ಕೊಂಡು ಕ್ರಾಂತಿಕಾರರ ಸಂಗಡವನ್ನು ಸೇರಿದರು. ೨—೩ ರಾಜಕೀಯ ಕ್ರಾಂತಿಯ ಖಟ್ಲೆಗಳಲ್ಲಿ ಇವರ ಮೇಲೆ ಆರೋಪಗಳಿಡಲಾಗಿದ್ದವು. ಆದರೆ ಈ ಎಲ್ಲ ಕಾಲಕ್ಕೂ ಅವರು ಒಳ್ಳೇ ಚಾತುರ್ಯದಿಂದ ತಮ್ಮ ಬಿಡುಗಡೆ ಮಾಡಿಕೊಂಡರು. ಮಹಾಯುದ್ಧವು ಪ್ರಾರಂಭವಾದ ಮೇಲಂತೂ ನರೇಂದ್ರ ಭಟ್ಟಾಚಾರ್ಯ ಮತ್ತು ಅವರ ಸಹಕಾರಿಗಳ ಚಳವಳಿಗಳು ಮತ್ತಿಷ್ಟು ಜೋರಿನಿಂದ ನಡೆದವು. ಬಂಗಾಲ ಪ್ರಾಂತಕ್ಕೆ ಸ್ವಾತಂತ್ರ್ಯವನ್ನು ದೊರಕಿಸುವ ಸಲುವಾಗಿ ಜರ್ಮನಿಯಿಂದ ಶಸ್ತ್ರಾಸ್ತ್ರಗಳನ್ನು ದೊರಕಿಸುವ ಪ್ರಯತ್ನ ಮಾಡುವದಕ್ಕಾಗಿ ನರೇಂದ್ರರ ಯೋಜನೆ ಮಾಡಲಾಯಿತು. "ಜಾನ ಮಾರ್ಟಿನ್" ಎಂಬ ಹೆಸರಿನಿಂದ ಒಂದೆರಡು ಸಲ ಅವರು ಪ್ರವಾಸ ಮಾಡಿದರೆಂಬ ಉಲ್ಲೇಖವು ಸಹ ಸರಕಾರಿ ವರದಿಗಳಲ್ಲಿ ಪ್ರಸಿದ್ಧ ಮಾಡಲಾಗಿದೆ. ಆದರೆ ಕೊನೆಗೆ ಈ ಗುಟ್ಟು ಹೊರಬಿದ್ದು ಬಂಗಾಲ ಪ್ರಾಂತದಲ್ಲಿ ಸ್ವರಾಜ್ಯ ಸ್ಥಾಪಿಸುವ ಅವರ ಕಲ್ಪನೆಯು ನಿರರ್ಥಕವಾಯಿತು ಮತ್ತು ತಮ್ಮ ಹಿಂದಿನ ಪೋಲೀಸರ ಪೀಕಲಾಟವನ್ನು ತಪ್ಪಿಸುವದಕ್ಕಾಗಿ ಈ ಸಾಹಸೀ ಯುವಕನಿಗೆ ತಮ್ಮ ಎಳೆ ವಯಸ್ಸಿನಲ್ಲಿಯೇ ಗುಪ್ತರೀತಿಯಿಂದ ದೇಶಾಂತರ ಮಾಡಬೇಕಾಯಿತು. ಈ ಒಂದೆರಡು ವರ್ಷಗಳಲ್ಲಿಯ ಅವರ ಪ್ರವಾಸದಬಗ್ಗೆ ಒಂದು ಮನೋರಂಜಕವಾದ ಸಂಗತಿಯು ಅವರ ಮಿತ್ರರಿಂದ ಹೇಳಲ್ಪಡುತ್ತದೆ. ಕಾಂ. ರಾಯ ಹಾಗೂ ಅವರ ಓರ್ವ ತರುಣ ಮಿತ್ರನು ಬೋಟಿನಿಂದ ಪ್ರವಾಸವಾ

ಡುತ್ತಿರುವಾಗ ಇಬ್ಬರು ಬಂಗಾಲಿ ಕ್ರಾಂತಿಕಾರರು ಇದೇ ಬೋಟಿ ನಿಂದ ಪ್ರವಾಸಮಾಡುತ್ತಿರುವರೆಂಬ ಸುದ್ದಿಯು ಪೋಲೀಸರಿಗೆ ತಿಳಿದು ಅವರು ಆ ಬೋಟಿನ ಝಡತಿಯನ್ನು ಪ್ರಾರಂಭಿಸಿದರು. ಆ ಕಾಲಕ್ಕೆ ಕಾಂ. ರಾಯರು ತಮ್ಮ ಕೇಬಿನ್ನಿನಲ್ಲಿ (ಬೋಟಿನಲ್ಲಿಂಯ ಕೋಣೆ) ಹಿಂದುಸ್ಥಾನದ ನಕಾಶೆಯನ್ನು ತಕ್ಕೊಂಡು ತಮ್ಮ ಮುಂದಿನ ಕಾರ್ಯದ ವಿಚಾರವನ್ನು ನಡೆಸಿದ್ದರು. ಅದೇ ಕಾಲಕ್ಕೆ ಪೋಲೀಸರು ಬಾಗಿಲವನ್ನು ದೂಡಿದರು. ಕೂಡಲೆ ಕಾಂ. ರಾಯರು ಕೈಯಲ್ಲಿಯ ನಕಾಶೆ ಹಾಗೂ ಪುಸ್ತಕಗಳನ್ನು ತಕ್ಕೊಂಡು ತಮ್ಮ ಹಾಸಿಗೆಯ ಬುಡಕ್ಕೆ ಇಟ್ಟು ಪ್ರಸಿದ್ಧ ರಶಿಯನ್ ಮಹಾತ್ಮರಾದ ಕೌಂಟ ಟಾಲಸ್ಟಾಯ ಇವರ "ಮಾಯ ರಿಲಿಜನ್" (ನನ್ನ ಧರ್ಮ) ವೆಂಬ ಪುಸ್ತಕವನ್ನು ಕೈಯಲ್ಲಿ ಹಿಡಿದು ವಾಚನಮಗ್ನರಾಗಿ ಕುಳಿತರು. ಪೋಲಿಸರು ಒಳಗೆ ಬಂದು ಆ ಇಬ್ಬರೂ ತರುಣರಿಗೆ ಪ್ರಶ್ನೆಗಳನ್ನು ಕೇಳಲಾರಂಭಿಸಿದರು. ಇವರೀರ್ವರ ಮುದ್ರೆಗಳೂ ಶಾಂತ ಹಾಗೂ ನಿರ್ವಿಕಾರವಾಗಿ ಕಾಣಿಸುತ್ತಿದ್ದು ಪೋಲೀಸರ ಪ್ರಶ್ನೆಗಳಿಗೆ ಕಾಂ. ರಾಯರವರು ಯೋಗ್ಯವಾದ ಉತ್ತರಗಳನ್ನು ಕೊಡುವದಲ್ಲದೆ ಬಂಗಾಲಿ ಕ್ರಾಂತಿಕಾರರ ಅನಿಷ್ಟ ಕಾರ್ಯಗಳ ಮೇಲೆಯಾದರೂ ವಿಪರೀತವಾಗಿ ಟೀಕೆಯನ್ನು ಮಾಡಿದರು. ತಮ್ಮ ಉತ್ತರದಿಂದ ಪೋಲೀಸ ಅಧಿಕಾರಿಗಳ ಸಂಪೂರ್ಣ ಸಮಾಧಾನವಾಗಿರುವದೆಂದು ಕಂಡಕೂಡಲೆ ರಾಯರು ಅವರಿಗೆ ಪ್ರಶ್ನೆ ಮಾಡಿದರು. "ಏಕೆ, ನೀವು ಯಾವ ತರುಣರ ಶೋಧವನ್ನು ನಡೆಯಿಸಿರುವಿರೋ ಆ ತರುಣರು ನಾವೇ ಅಲ್ಲೆಂದು ಹೇಗೆ ತಿಳಿಯುವಿರಿ?" ಈ ಪ್ರಶ್ನೆಗೆ ಪೋಲೀಸ ಅಧಿಕಾರಿಗಳು ನಕ್ಕು ಉತ್ತರ ಕೊಟ್ಟದ್ದೇನಂದರೆ "ನನ್ನ ಧರ್ಮ ಎಂಬ ಪುಸ್ತಕವನ್ನು ಓದುವ ಎಳೆ ಯುವಕರು ಕ್ರಾಂತಿಕಾರರಿರಲಾರರು." ಈ ಸಂಗತಿಯನ್ನು ಸ್ವತಃ ರಾಯರೇ ತಮ್ಮ ಮಿತ್ರರಿಗೆ ಹೇಳಿದರು ಮತ್ತು ಅವರು ಆ ಕಾಲಕ್ಕೆ ನಗುತ್ತ ನುಡಿದದ್ದೇನಂದರೆ; 'ನನ್ನ ಧರ್ಮ' ವೇ ಆ ಕಾಲಕ್ಕೆ ನನಗೆ ಬದುಕಿಸಿತು. ಆದರೆ ಅವರನ್ನು ಉಳಿಸುವದಕ್ಕೆ ಅವರ ಪ್ರಸಂಗಾವಧಾನವೇ ಕಾರಣೀ

ಭೂತನಾಯಿತು, ಆದರೆ ಧರ್ಮವಲ್ಲ. ಕಾಂ. ರಾಯರಲ್ಲಿ ಕೇವಲ ಇದೊಂದೇ ಗುಣವಿರುವದಿಲ್ಲ. ಅತುಲವಾದ ಧೈರ್ಯ, ತೀಕ್ಷ್ಣ ನಾದ ಬುದ್ಧಿ ಮತ್ತೆ, ನಿರಪೇಕ್ಷ ಮತ್ತು ನಿರಹಂಕಾರ ವೃತ್ತಿಗಳು ಸಮುಚ್ಚಯವಾಗಿದ್ದುದರಿಂದಲೇ ಅವರಿಂದ ಎಷ್ಟೋ ಮಹತ್ವದ ಕಾರ್ಯಗಳಾಗಿವೆ. ಅವರು ತಮ್ಮ ಈ ಎಲ್ಲ ಗುಣಗಳ ಉಪಯೋಗವನ್ನು ತಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ಹಾಗೂ ದಲಿತ ವರ್ಗದ ಉದ್ಧಾರಕ್ಕಾಗಿ ಮಾಡಿಕೊಂಡರೆಂಬುವದರಲ್ಲಿಯೇ ಅವರ ಮನಸ್ಸಿನ ದೊಡ್ಡಸ್ತಿಕೆಯಿರುವದು.

## ಮೆಕ್ಸಿಕೋಕ್ಕೆ ಪ್ರಯಾಣ

ಹಿಂದುಸ್ಥಾನದಿಂದ ಹೊರಟ ಮೇಲೆ ಕಾಮ್ರೇಡ ರಾಯರವರು ಗುಪ್ತರೀತಿಯಿಂದ ಅನೇಕ ದೇಶಗಳಲ್ಲಿ ಪ್ರವಾಸ ಮಾಡಿ ಅ ಮೋಲ್ಯವಾದ ಜ್ಞಾನವನ್ನು ಸಂಪಾದಿಸುತ್ತ ಸಿಂಗಾಪುರಕ್ಕೆ ಸೇರಿದರು. ಮುಂದೆ ಕೆಲವು ಮಿತ್ರರ ಸಹಾಯದಿಂದ ಅವರು ಹಾಂಗಕಾಂಗ ಪಟ್ಟಣಕ್ಕೆ ತಲುಪಿದರು. ಅಲ್ಲಿಂದ ಅವರು ಜಪಾನ ಮಾರ್ಗವಾಗಿ ಅಮೇರಿಕಾ ಖಂಡಕ್ಕೆ ಹೋದರು. ಅಮೇರಿಕಾಕ್ಕೆ ಹೋದ ಬಳಿಕ ಕಾಂ. ರಾಯರವರು ತಮಗೆ ಅನುರೂಪವಾಗಿರುವ ಓರ್ವ ಅಮೇರಿಕನ್ ಯುವತಿಯೊಡನೆ ವಿವಾಹ ಮಾಡಿಕೊಂಡರು. ಅದೇ ಕಾಲಕ್ಕೆ ಮೆಕ್ಸಿಕೋದಲ್ಲಿ ಕ್ರಾಂತಿಕಾರಕ ಚಳವಳಿಯು ಜೋರಿನಿಂದ ನಡೆದಿದ್ದು ಅಲ್ಲಿ ರಾಜಸತ್ತೆಯನ್ನು ನಷ್ಟಮಾಡಿ ಲೋಕಶಾಹಿಯ ಸ್ಥಾಪನೆ ಮಾಡುವದಕ್ಕಾಗಿ ಮೆಕ್ಸಿಕನ್ ಜನರು ಪ್ರಯತ್ನ ನಡೆಸಿದ್ದರು. ಕಾಂ. ಎಂ. ಎನ್. ರಾಯರು ಅಲ್ಲಿಗೆ ಹೋಗಿ ಮೆಕ್ಸಿಕನ್ ಜನರ ಸ್ವಾತಂತ್ರ್ಯಯುದ್ಧದಲ್ಲಿ ಧುಮುಕಿ ಅಲ್ಲಿಯ ಕ್ರಾಂತಿಕಾರರ ಚಳವಳಿಯಲ್ಲಿ ಬಿದ್ದರು. ಅದರಲ್ಲಿ ಅವರಿಗೆ ೧೨ ವರ್ಷ ಸಶ್ರಮ ಶಿಕ್ಷೆಯಾಯಿತು. ಅವರು ಬಹಳ ಸಾಹಸದಿಂದ ಮೆಕ್ಸಿಕೋ ಜೇಲಿನಿಂದ ಹೊರಬಿದ್ದು ತಪ್ಪಿಸಿಕೊಂಡು ಹೊರಟು ಹೋದರು. ಈ ಸ್ವಾತಂತ್ರ್ಯ ಯುದ್ಧದಲ್ಲಿ ಭಾಗವಹಿಸಿ ಅಲ್ಲಿಯೇ ಮಾನವೇಂದ್ರನಾಥರಾಯ

ಎಂಬ ಹೆಸರಿನಿಂದ ಜಗತ್ಪ್ರಸಿದ್ಧರಾದರು. ಇದೇ ಸಮಯದಲ್ಲಿ ಅವರು ಸುಪ್ರಸಿದ್ಧ ಕಮ್ಯುನಿಸ್ಟ ತತ್ವವೇತ್ತನಾದ ಕಾರ್ಲಮಾರ್ಕ್ಸ್‌ನ ವಾಙ್ಮಯದ ಅಭ್ಯಾಸವನ್ನು ಮಾಡಲಾರಂಭಿಸಿದರು. ಮಾರ್ಕ್ಸವಾದದ ಪರಿಣಾಮವು ಅವರ ಮನಸ್ಸಿನ ಮೇಲೆ ಆಗಿ ಅದರಿಂದ ಅವರ ಮತಗಳಲ್ಲಿ ಬದಲಾವಣೆಯಾಯಿತು ಮತ್ತು ಸಾಮುದಾಯಿಕ ಚಳವಳಿಯ ಬಲದಿಂದ ವಿಷಮತೆಯಮೇಲೆ ನಿಂತಿರುವ ಸಧ್ಯದ ಸಮಾಜಪಧ್ಧತಿಯನ್ನು ನಷ್ಟಗೊಳಿಸುವದೇ ನಿಜವಾದ ಕಾರ್ಯವಿರುವದೆಂಬ ಅವರ ಮನವರಿಕೆಯಾಯಿತು. ವ್ಯಕ್ತಿಗತ ಅತ್ಯಾಚಾರಗಳ ಮಾರ್ಗದ ಮೇಲಿರುವ ವಿಶ್ವಾಸವು ನಷ್ಟವಾಯಿತು. ಮತ್ತು ತಮ್ಮ ಎಲ್ಲ ಬುದ್ಧಿ ಮತ್ತು ಶಕ್ತಿಯನ್ನು ಸಾಮುದಾಯಿಕ ಹೋರಾಟದ ಪುರಸ್ಕಾರ ಮಾಡುವವರ ಸಲುವಾಗಿಯೇ ಖರ್ಚು ಮಾಡಬೇಕೆಂದು ಅವರು ನಿಶ್ಚಯಿಸಿದರು. ಇದರದೇ ಪ್ರತ್ಯಕ್ಷ ಫಲವೆಂದರೆ ಮೆಕ್ಸಿಕೋದಲ್ಲಿಯ ಅವರ ಕಾರ್ಯವು. ಈ ಕಾರ್ಯದಿಂದ ಜಗತ್ತಿನಲ್ಲಿ ಹಬ್ಬಲಾರಂಭಿಸಿದ ಸಮಾಜವಾದಿ ಚಳವಳಿಯೊಡನೆ ಅವರ ಸಂಬಂಧವು ಬಂದಿತು. ಮತ್ತು ಹೊಸ ಹೆಸರಿನೊಡನೆ ಅವರ ಹೊಸ ಆಯುಷ್ಯಕ್ರಮಕ್ಕೆ ಆರಂಭವಾಯಿತು. ಕಮ್ಯುನಿಝುಮದ ತೇಜಸ್ವೀ ತತ್ವಜ್ಞಾನದ ಮೇಲೆ ತಮ್ಮ ನಿಷ್ಠೆಯನ್ನು ಒಮ್ಮೆ ಸ್ಥಿರಮಾಡಿದ ಬಳಿಕ ಅವರು ತಮ್ಮಲ್ಲಿಯ ಲೋಕೋತ್ತರವಾದ ಶಕ್ತಿಯನ್ನು ಸಾಮ್ಯವಾದದ ಪ್ರಚಾರಾರ್ಥವಾಗಿ ಹಾಗೂ ಪ್ರಸ್ಥಾಪನಾರ್ಥವಾಗಿ ವ್ಯತೀತ ಮಾಡುವ ನಿಶ್ಚಯವನ್ನು ಮಾಡಿದರು. ಮತ್ತು ಕಳೆದ ೧೮-೧೯ ವರ್ಷಗಳಲ್ಲಿ ಈ ಮಹಾ ವ್ರತದ ಸಿಧ್ಯರ್ಥವಾಗಿ ಅವರು ಅವಿಶ್ರಾಂತವಾದ ಪರಿಶ್ರಮಗಳನ್ನು ಮಾಡಿರುವರು.

## ಕಾಂ. ಲೇನಿನ್ನರ ಆಮಂತ್ರಣವು

ಮೆಕ್ಸಿಕೋದಲ್ಲಿ ಸ್ವಾತಂತ್ರ್ಯಯುದ್ಧವು ಸಮಾಪ್ತವಾದ ಬಳಿಕ ಕಾಂ. ರಾಯ ಇವರು ತಮ್ಮ ಸಂಘಟನ ಸಾಮರ್ಥ್ಯದ ಬಲದಿಂದ ಹಾಗೂ ವೃತ್ತಪತ್ರಗಳಲ್ಲಿ ಲೇಖನಗಳನ್ನು ಬರೆದು ಕಮ್ಯುನಿ

ಝುಂಮುದ ಪ್ರಚಾರವನ್ನು ಪ್ರಾರಂಭಿಸಿದರು. ಇದೇ ಕಾಲಕ್ಕೆ ರಶಿಯಾ ದಲ್ಲಿ ಕಾಮ್ರೇಡ ಲೇನಿನ್ನರ ನೇತೃತ್ವದಲ್ಲಿ ಕಮ್ಯುನಿಸ್ಟ ಪಾರ್ಟಿಯ ಬಲಶಾಲಿಯಾದ ಸಂಘಟನೆಯಿಂದ ಝಾರಶಾಹಿಯ ಜುಲುಮೆಯ ರಾಜ್ಯಪದ್ಧತಿಯು ವಿಧ್ವಂಸವಾಗಿ ಕೂಲಿಕಾರರ ಅಧಿ ರಾಜ್ಯವು ಪ್ರಸ್ಥಾಪಿತವಾಗಿತ್ತು. ಮಹಾಯುದ್ಧದಲ್ಲಿಯ ಪ್ರಲಯ ದಿಂದ ಎಲ್ಲ ಬಂಡವಲುಗಾರ ರಾಷ್ಟ್ರಗಳಲ್ಲಿಯ ಸತ್ತಾಧೀಶ ವರ್ಗದ ಸಿಂಹಾಸನಗಳು ತತ್ತರಿಸಲಿಕ್ಕೆ ಹತ್ತಿದವು. ಮತ್ತು ವರ್ಗಜಾಗ್ರತ ರಾದ ಕೂಲಿಕಾರ-ಒಕ್ಕಲಿಗ ವರ್ಗದ ಪ್ರಚಂಡ ಹೋರಾಟದ ತೆರೆಗಳು ಉಕ್ಕೇರಿಬರಹತ್ತಿದವು. ಕೇವಲ ರಶಿಯಾದಲ್ಲಿಯೇ ಸಾಮ್ಯವಾದೀ ಅಧಿರಾಜ್ಯವನ್ನು ಸ್ಥಾಪಿಸುವ ಸಂಕುಚಿತವಾದ ಧ್ಯೇಯವು ಲೇನಿನ್ ಮತ್ತು ಅವನ ಕಮ್ಯುನಿಸ್ಟ ಸಹಕಾರಿಗಳ ಮುಂದಿರಲಿಲ್ಲ. ಆದರೆ ಕಮ್ಯುನಿಸ್ಟ ಕ್ರಾಂತಿಯನ್ನು ಮಾಡಿ ಶ್ರಮಜೀವಿ ಬಹುಜನ ಸಮಾ ಜದ ರಕ್ತಶೋಷಣೆಯನ್ನು ಮಾಡುವ ಅಲ್ಪಸಂಖ್ಯಾಕ ಬಂಡವಲು ಗಾರ ವರ್ಗದ (ವರ್ಗದೃಷ್ಟಿಯಿಂದ) ನಾಶಮಾಡುವ ಮತ್ತು ಶ್ರಮ ಜೀವಿ ಬಹುಜನ ಸಮಾಜದ ಆಳಿಕೆಯನ್ನು ಪ್ರಸ್ಥಾಪಿತಗೊಳಿಸಿ ವರ್ಗವಿಹೀನ ಸಮಾಜ ವ್ಯವಸ್ಥೆಯನ್ನು ಸ್ಥಾಪಿಸುವ ಉದಾತ್ತ ಮತ್ತು ವ್ಯಾಪಕವಾದ ಧ್ಯೇಯವು ಲೇನಿನ್ನನ ಮುಂದೆ ಇತ್ತು. ಆದ್ದ ರಿಂದ ರಶಿಯಾದಲ್ಲಿ ಕೂಲಿಕಾರರ ರಾಜ್ಯವು ದೃಢಮೂಲವಾದಬಳಿಕ ಲೇನಿನ್ನನು ಜಾಗತಿಕ ಚಳವಳಿಯ ಕಡೆಗೆ ತಮ್ಮ ದೃಷ್ಟಿಯನ್ನು ಹೊರಳಿಸಿ ಈ ಕಾರ್ಯಕ್ಕಾಗಿ ಕಮ್ಯುನಿಸ್ಟ ಇಂಟರ ನ್ಯಾಶನಲವೆಂಬ ಜಗತ್ಪ್ರಸಿದ್ಧವಾದ ಕ್ರಾಂತಿಕಾರಕ ಸಂಸ್ಥೆಯನ್ನು ಸ್ಥಾಪಿಸಿದನು. ಕಾಂ. ರಾಯ ಇವರ ಮಾರ್ಕಿಸ್ಟ ಮತ ಪ್ರಚಾರ ಮತ್ತು ಮೆಕ್ಸಿಕೋದ ಸ್ವಾತಂತ್ರ್ಯ ಯುದ್ಧದಲ್ಲಿ ಅವರು ಮಾಡಿದ ಕಾರ್ಯದಿಂದ ಇಡೀ ಜಗತ್ತಿನಲ್ಲಿಯ ಕ್ರಾಂತಿಕಾರರ ಲಕ್ಷವು ಕಾಂ. ರಾಯರ ಕಡೆಗೆ ಹೊರ ಳಿತ್ತು. ಕಾಂ. ಲೇನಿನ್ನನಂಥ ರಾಜಕಾರಣಪಟುವಿನ ಚಾಣಾಕ್ಷ ದೃಷ್ಟಿಯು ಕಾಂ. ರಾಯರಮೇಲೆ ಬಿದ್ದಿರುವದು ಸಹಜವಾಗಿತ್ತು. ಆದ್ದರಿಂದ ಕೂಡಲೇ ಲೇನಿನ್ನನು ಕಾಂ. ರಾಯರವರಿಗೆ ಥರ್ಡ

ಇಂಟರ ನ್ಯಾಶನಲ್ಲಿನ ಚಳವಳಿಯಲ್ಲಿ ಎಳೆಯಬೇಕೆಂದು ನಿಶ್ಚಯಿಸಿ ಆ ಮೇರೆಗೆ ಅವನು ತಮ್ಮ ವಿಶ್ವಾಸಿಕ ಸಹಕಾರಿಯಾದ ಕಾಂ ಬೋರೋಡಿನ್ ಇವರೊಡನೆ ಕಾಂ. ರಾಯರವರಿಗೆ ರಶಿಯಾಕ್ಕೆ ಬರುವದಕ್ಕಾಗಿ ಆಮಂತ್ರಣವನ್ನು ಕಳಿಸಿದನು.

ರಶಿಯಾದಂಥ ಕೂಲಿಕಾರರ ರಾಜ್ಯಕ್ಕೆ ಹೋಗಿ ಅಲ್ಲಿಯ ಕಾಂ. ಲೇನಿನ್, ಕಾಂ. ಟ್ರಾಟಿಸ್ಕಿ, ಕಾಂ ಸ್ಟ್ಯಾಲಿನ ಮೊದಲಾದ ಕಮ್ಯುನಿಸ್ಟ ಕ್ರಾಂತಿಕಾರರ ಹೆಗಲಿಗೆ ಹೆಗಲುಹಚ್ಚಿ ತಮಗೆ ಅತ್ಯಂತ ಪ್ರಿಯವಾಗಿದ್ದ ಸಾಮ್ಯವಾದಂತಹ ಉಚ್ಚ ಧ್ಯೇಯ ಪ್ರಚಾರ ಮಾಡುವ ಈ ಸುಸಂಧಿಯನ್ನು ಕಾಂ ರಾಯರು ಕಳೆದುಕೊಳ್ಳಲಿಲ್ಲ ಅವರು ಅತ್ಯಾನಂದದಿಂದ ಕಾಂ. ಲೇನಿನ್ನರ ಆಮಂತ್ರಣವನ್ನು ಸ್ವೀಕರಿಸಿ ಕಾಂ· ಬೋರೋಡಿನ್ನನೊಡನೆ ಮಾಸ್ಕೋ ( ರಶಿಯಾದ ರಾಜಧಾನಿ )ಕ್ಕೆ ಪ್ರಯಾಣ ಬೆಳಸಿದರು.

## ಕೂಲಿಕಾರರ ರಾಜ್ಯದಲ್ಲಿ

ಅದು ೧೯೧೭–೧೮ ರ ಕಾಲವಿದ್ದು ಸೋವ್ಹಿಯಟ ರಶಿಯಾದಲ್ಲಿ ಹೊಸ ಸಮಾಜ ಪದ್ಧತಿಯ ಪುನರ್ಘಟನೆಯ ಕಾರ್ಯವು ನಡೆದಿತ್ತು. ಕಾಂ. ರಾಯರು ಮಾಸ್ಕೋಕ್ಕೆ ಬಂದನಂತರ ಸ್ವಲ್ಪಾವಧಿಯಲ್ಲಿಯೇ ರಶಿಯನ್ ಕಮ್ಯುನಿಸ್ಟರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿದರು. ಮತ್ತು ಕಾಂ. ಲೇನಿನ್, ಬೋರೋಡಿನ್ ಮೊದಲಾದವರ ಸಲಹೆಯ ಮೇರೆಗೆ ಒಳ್ಳೇ ಅಹಮಹಿಮಿಕೆಯಿಂದ ಅಂತರ ರಾಷ್ಟ್ರೀಯ ಕ್ರಾಂತಿಕಾರಕ ಚಳವಳಿಯ ಕಣಕ್ಕಿಳಿದರು. ಈ ಕಾಲಕ್ಕೆ ಕಾಂ. ರಾಯರವರಿಗೆ ತಮ್ಮ ಪೂರ್ವಾಯುಷ್ಯದಲ್ಲಿ ಹಿಂದುಸ್ಥಾನ, ಚೀನ, ತುರ್ಕಸ್ಥಾನ, ಮೆಕ್ಸಿಕೋ ಮೊದಲಾದ ದೇಶಗಳಲ್ಲಿಯ ದೊರೆತ ಅನುಭವದ ಒಳ್ಳೇ ಲಾಭವಾಯಿತು. ಕಮ್ಯುನಿಸ್ಟ ಇಂಟರನ್ಯಾಶನಲ್ ಈ ಸಂಸ್ಥೆಯ ಸ್ಥಾಪನೆಯ ಕಾಲಕ್ಕಾದರೂ ಕಾಂ. ರಾಯರವರ ಬಹಳ ಸಹಾಯವಾಯಿತು. ರಶಿಯನ್ ತುರ್ಕ

ಸ್ಥಾನದಲ್ಲಿಯ ಸಂಘಟನೆಯ ಕಾರ್ಯದ ಬಹಳಷ್ಟು ಶ್ರೇಯ ಸ್ಸಾದರೂ ಅವರಿಗೇ ಸಲ್ಲುತ್ತದೆ. ಅವರು ಪೆಟ್ರೋಗ್ರಾಡ ಸೋವ್ಹಿಏಟದ ಓರ್ವ ಪ್ರಮುಖ ಸಭಾಸದರಿದ್ದರು. ರಶಿಯಾದ ಪಾಲಿಟಬ್ಯೂರೋದಲ್ಲಿ ಮತ್ತು ಆ ಬಳಿಕ ಕಾಂ. ಲೇನಿನ, ಟ್ರಾಟಸ್ಕಿ, ಝಿನೋವ್ಹಿಫ, ಕಾಮನೇವ್ಹ ಮೊದಲಾದ ಪ್ರಸಿದ್ಧ ಕಮ್ಯುನಿಸ್ಟರೊಡನೆ ಅವರಿಗೆ ಪ್ರಿಸಿಡಿಯಮದಲ್ಲಿಯೂ ಶ್ರೇಷ್ಠ ತರಗತಿಯ ಸ್ಥಾನವು ಕೊಡಲಾಗಿತ್ತು. ಅವರಿಗೆ ಕಮ್ಯುನಿಸ್ಟ ಇಂಟರನ್ಯಾಶನಲ್ಲದ ಪೂರ್ವಭಾಗದ ಕೇಂದ್ರದ ಮುಖ್ಯರನ್ನಾಗಿ ಮಾಡಿ ಅವರ ನೇತೃತ್ವದಲ್ಲಿಯೇ ಹಿಂದುಸ್ಥಾನ ಮತ್ತು ಉಳಿದ ವಸಾಹತಿಗಳಲ್ಲಿಯ ಚಳವಳಿಗಳು ೧೯೨೮ ನೇ ಇಸ್ವಿಯವರೆಗೆ ನಡೆಸಲ್ಪಟ್ಟವು. ಇಷ್ಟು ಅಲ್ಪಾವಧಿಯಲ್ಲಿ ಜಗತ್ತಿನಲ್ಲಿಯ ಚಳವಳಿಯಲ್ಲಿ ಇಷ್ಟು ಉಚ್ಚಸ್ಥಾನವನ್ನು ದೊರಕಿಸುವ ಬಹುಮಾನವನ್ನು ಸಂಪಾದಿಸುವ ಮೊಟ್ಟಮೊದಲಿನ ಹಿಂದೀ ಗೃಹಸ್ಥರೆಂದರೆ ಕಾಂ. ರಾಯರೊಬ್ಬರೇ ಇದ್ದು ಇವರ ಮೇಲಿಂದಲೇ ಅವರ ಕರ್ತೃತ್ವಶಕ್ತಿಯ ಅರಿವು ಆಗುತ್ತದೆ.

## ಹಿಂದೀ ಕೂಲಿಕಾರರ ಚಳವಳಿಯ ಪ್ರವರ್ತಕರು

ಕಮ್ಯುನಿಸ್ಟ ಇಂಟರನ್ಯಾಶನಲ್ಲಿನ ಪೌರ್ವಾತ್ಯ ಕೇಂದ್ರದ ಪ್ರಮುಖರೆಂದು ಹಿಂದುಸ್ಥಾನದಲ್ಲಿಯ ಚಳವಳಿಯೊಡನೆ ಅವರ ಸಂಬಂಧವು ಬಂದಿತು. ವಸಾಹತಿಗಳಲ್ಲಿಯ ಪರಿಸ್ಥಿತಿಯ ಬಗ್ಗೆ ಅವರಷ್ಟು ಮಾಹಿತಿಯು ಇನ್ನಾರಿಗೂ ಇರುವದು ಶಕ್ಯವಿದ್ದಿಲ್ಲ. ಆದ್ದರಿಂದಲೇ ಕಾಂ. ಲೇನಿನ್ನರು ಕಾಂ. ರಾಯರವರಿಗೆ ತಮ್ಮ ವಿಶ್ವಾಸದಲ್ಲಿ ತಕ್ಕೊಂಡರು. ಮತ್ತು ಕಾಂ. ರಾಯರವರು ಮಾಡಿದ ಅಪೂರ್ವವಾದ ಕಾರ್ಯದಿಂದ ಅವರು ಕಾಂ. ಲೆನಿನ್ನರ ವಿಶ್ವಾಸಕ್ಕೆ ಸಂಪೂರ್ಣವಾಗಿ ಪಾತ್ರರಿದ್ದರೆಂಬುದು ಸಿದ್ಧಮಾಡಿಕೊಟ್ಟರು. ಒಮ್ಮೆ ಹಿಂದೀ ಬಂಡವಲುಗಾರರ ದೃಷ್ಟಿಕೋಣದ ಬಗ್ಗೆ ಕಾಂ. ಲೇನಿನ್ನರೊಡನೆ ಕಾಂ. ರಾಯರವರ ಮತಭೇದವಾಗಿತ್ತು ಸಾಮ್ರಾಜ್ಯಶಾಹಿಯವರು ಹಿಂದೀ ಬಂಡವಲುಗಾರರಿಗೆ 'ಚಿಕ್ಕಪಾಲುಗಾರಿಕೆ' ಯನ್ನು ಕೊಟ್ಟು ತಮ್ಮ ಅಂಕಿತದಲ್ಲಿಟ್ಟುಕೊಂಡಿದ್ದು ಆದರಿಂದ

ಅವರು ಕ್ರಾಂತಿ ವಿರೋಧಿಗಳು ಮತ್ತು ಪ್ರತಿಗಾಮಿಗಳಾಗಿರುವರೆಂದು ರಾಯರವರ ಅಭಿಪ್ರಾಯವಿತ್ತು. ಆದರೆ, ಹಿಂದೀ ಬಂಡವಲುಗಾರರ ದೃಷ್ಟಿಕೋನವು ಸಂಪೂರ್ಣವಾಗಿ ಕ್ರಾಂತಿವಿರೋಧಿ ಇರದೇ ಅವರು ಸಾಮ್ರಾಜ್ಯಶಾಹಿಯೊಡನೆ ಹೋರಾಡಬಹುದೆಂದು ಕಾಂ. ಲೆನಿನ್ನರ ಅಭಿಪ್ರಾಯವಿತ್ತು. ಕೊನೆಗೆ ಕಾಂ. ರಾಯರು ತಮ್ಮ ಅಭಿಪ್ರಾಯದ ಬಗ್ಗೆ ಕಾಂ. ಲೇನಿನ್ನರ ಮನವರಿಕೆ ಮಾಡಿಕೊಟ್ಟರು ಹಿಂದುಸ್ಥಾನದಲ್ಲಿ ೧೯೨೦—೨೧ ನೇ ಇಸ್ವಿಯ ಸುಮಾರಕ್ಕೆ ಮುಂಬಯಿಯಲ್ಲಿ ಕಾಂ. ಡಾಂಗೆಯವರ ನೇತೃತ್ವದಲ್ಲಿ ಸಾಮ್ಯವಾದಿ ವಿಚಾರಸರಣಿಯ ನವಯುವಕರ ಗುಂಪು ಸಿದ್ಧವಾಯಿತು. ಅವರು ಮೊದಲು 'ದಿ ಸೋಶಾಲಿಸ್ಟ' ಎಂಬ ಹಿಂದುಸ್ಥಾನದಲ್ಲಿಯ ಮೊಟ್ಟ ಮೊದಲನೆಯ ಸಾಮ್ಯವಾದಿ ನಿಯತಕಾಲಿಕವನ್ನಾದರೂ ಪ್ರಸಿದ್ಧಿಸುತ್ತಿದ್ದರು. ಆ ಕಾಲಕ್ಕೆ ಕಾಂ. ಡಾಂಗೆ ಇವರು ಬರೆದ, ಗಾಂಧೀ ವಿರುದ್ಧ 'ಲೇನಿನ' ಎಂಬ ಪ್ರಬಂಧದಿಂದ ಕಾಂ. ರಾಯರವರ ಲಕ್ಷವು ಮುಂಬಯಿಯ ಕೂಲಿಕಾರ ಕಾರ್ಯಕರ್ತರ ಕಡೆಗೆ ಹೆಚ್ಚಾಗಿ ಹೊರಳಿತು ಮತ್ತು ಆಗಿನಿಂದಲೇ ಹಿಂದೀ ತರುಣರೊಡನೆ ರಾಯರವರ ಸಂಬಂಧವು ಬೆಳೆಯುತ್ತ ನಡೆಯಿತು. ಮುಂದೆ ಸ್ವಲ್ಪಾವಧಿಯಲ್ಲಿಯೇ ಕಾಮ್ಯುನಿಸ್ಟ ಜಾಹೀರನಾಮೆಯು ಪ್ರಸಿದ್ಧವಾಗಿ ಹಿಂದುಸ್ತಾನದಲ್ಲಿಯ ಕೂಲಿಕಾರರ ಸಂಘಟನೆಯು ಕಾಂ. ಇವರ ನೇತೃತ್ವದಲ್ಲಿಯೇ ಒಳ್ಳೇ ಜೋರಿನಿಂದ ನಡೆಯಿತು. ಆ ಕಾಲದ ಕೂಲಿಕಾರ ಮುಖಂಡರಾದ ಕಾಂ. ಮುಝಫರ ಅಹಮದ, ಡಾಂಗೆ, ನಿಂಬಕರ, ಮತ್ತು ಕಾಂ. ಶೌಕತ ಉಸ್ಮಾನಿ ಮೊದಲಾದವರ ಸ್ಫೂರ್ತಿದಾತರು ಕಾಂ. ರಾಯರೇ ಇದ್ದರು. ಕಾಂ. ರಾಯರೊಡನೆ ಸಂಬಂಧವನ್ನಿಟ್ಟ ಅಪರಾಧದಿಂದಲೇ ಈ ಕೂಲಿಕಾರ ಕಾರ್ಯಕರ್ತರ ವಿರುದ್ಧವಾಗಿ ಕಾನಪೂರ ಹಾಗೂ ಮಿರತ ಒಳಸಂಚಿನ ಖಟ್ಲೆಗಳು ಹಾಕಲ್ಪಟ್ಟಿದ್ದವು. ಮಿರತ ಒಳಸಂಚಿನ ಖಟ್ಲೆಯಿಂದಲೇ ಇಡಿ ಜಗತ್ತಿನ ಲಕ್ಷವು ಹಿಂದುಸ್ತಾನದಲ್ಲಿಯ ಕಮ್ಯುನಿಸ್ಟ ಚಳವಳಿಯ ಕಡೆಗೆ ಎಳೆಯಲ್ಪಟ್ಟಿತು. ಮಿರತ ಒಳಸಂಚಿನ ಖಟ್ಲೆಯ ಕಾಲಕ್ಕೆ ಕಾಂ. ರಾಯ

ರವರ ಬಗ್ಗೆ ಹಿಂದೀ ವೃತ್ತಪತ್ರಗಳಲ್ಲಿ ವಿಶೇಷವಾಗಿ ಚರ್ಚೆಯಾಯಿತೆನ್ನಬಹುದು.

## ಚೀನದಲ್ಲಿಯ ಕ್ರಾಂತಿಯು

ಆ ಬಳಿಕ ೧೯೨೭ರಲ್ಲಿ ಚೀನದಲ್ಲಿಯ ರಾಜ್ಯಕ್ರಾಂತಿಯ ಧುರೀಣತ್ವವನ್ನು ಸ್ವೀಕರಿಸುವದಕ್ಕಾಗಿ ಕಮ್ಯುನಿಸ್ಟ ಇಂಟರ ನ್ಯಾಶನಲ ಸಂಸ್ಥೆಯವರು ಕಾಂ. ರಾಯರವರಿಗೆ ಚೀನ ದೇಶಕ್ಕೆ ಕಳುಹಿಸಿಕೊಟ್ಟರು. ಅವರು ಚೀನದಲ್ಲಿಯ ಕ್ಯೋಮಿಟ್ಯಾಂಗವೆಂಬ ಸಂಸ್ಥೆಯ ನೇತೃತ್ವದಲ್ಲಿ ನಡೆದ ರಾಷ್ಟ್ರೀಯ ಸ್ವಾತಂತ್ರ್ಯದ ಚಳವಳಿಯೊಡನೆ ಸಹಕಾರ ಮಾಡಿ ಅಲ್ಲಿ ಕಮ್ಯುನಿಸ್ಟ ಚಳವಳಿಗೆ ಕಳೆತಂದರು. ಆದರೆ ಕ್ಯೋಮಿಟ್ಯಾಂಗದವರು ಜನರಲ ಚಿಆಂಗ ಕೈಶೇಕರ ನೇತೃತ್ವದಲ್ಲಿ ಕಮ್ಯುನಿಸ್ಟ ಚಳವಳಿಯೊಡನೆ ಪ್ರಚಾರಣೆಯನ್ನು ಮಾಡಿ ಮತ್ತು ಸ್ವದೇಶಿ ಬಂಡುವಲಶಾಹಿ, ಸರಂಜಾಮುಶಾಹಿ. ಭಿಕ್ಷುಕಶಾಹಿ ಮತ್ತು ಪರದೇಶಿ ಸಾಮ್ರಾಜ್ಯಶಾಹಿಯೊಡನೆ ಸಂಧಾನಗಳನ್ನು ಮಾಡಿ ಪ್ರತಿಕ್ರಾಂತಿಯನ್ನು ಮಾಡಿದರು. ಮತ್ತು ಈ ರೀತಿಯಾಗಿ ಕಾಂ. ರಾಯರವರೊಡನೆ ಹಾಗು ಕಮ್ಯುನಿಸ್ಟ ಚಳವಳಿಯೊಡನೆ ದ್ರೋಹವನ್ನು ಮಾಡಿ ಚೀನದಲ್ಲಿಯ ಅಸಂಖ್ಯ ಒಕ್ಕಲಿಗರ ಹಾಗೂ ಕೂಲಿಕಾರರ ಸಂಹಾರವನ್ನು ಮಾಡಿದರು. ಆದರೆ ಕ್ಯೋಮಿಟ್ಯಾಂಗದವರ ಪ್ರಚಾರಣೆಯಿಂದ ಕಾಂ. ರಾಯರವರಿಗೆ ದೊರೆತ ಅಯಶಸ್ವಿತೆಯ ದೋಷವನ್ನು ಅವರ ಪ್ರತಿಸ್ಪರ್ಧಿಗಳು ಅವರ ಮೇಲೆಯೆ ಹೇರುತ್ತಾರೆ ಮತ್ತು ಚೀನದಲ್ಲಿಯ ಅಸಂಖ್ಯ ಒಕ್ಕಲಿಗರ ಹಾಗೂ ಕೂಲಿಕಾರರ ಕ್ರೂರವಾದ ಸಂಹಾರಕ್ಕೆ ಕಾಂ. ರಾಯರ ಧೋರಣವೇ ಕಾರಣವಾಯಿತೆಂಬ ಸುಳ್ಳುಸೊಟ್ಟ ಸುದ್ದಿಗಳು ಸಹ ಹಬ್ಬಿಸುತ್ತಾರೆ. ಆದರೆ ಈ ಟೀಕೆಯಲ್ಲಿ ಯಳ್ಳಷ್ಟು ತಥ್ಯವಿಲ್ಲ. ಈ ವಿಷಯವಾಗಿ ಕಮ್ಯುನಿಸ್ಟ ಇಂಟರನ್ಯಾಶನಲ ಸಂಸ್ಥೆಯವರು ಕಾಂ. ರಾಯರವರಿಗೆ ದೋಷವನ್ನು ಕೊಟ್ಟಿಲ್ಲ ಇಷ್ಟೇ ಅಲ್ಲ ಅವರು ಕಾಂ. ರಾಯರ ಧೋರಣವೇ ಯೋಗ್ಯವಿತ್ತೆಂಬ ಅಭಿಪ್ರಾಯವನ್ನಾದರೂ ವ್ಯಕ್ತ ಮಾಡಿರುವರು. ನಿಜ

ವಾಗಿ ನೋಡಿದರೆ ಕಾಂ. ರಾಯರವರ ಧೋರಣಕ್ಕೆ ಚೀನದಲ್ಲಿಯ ಕಮ್ಯುನಿಷ್ಟ ಇಂಟರ ನ್ಯಾಶನಲ್ಲಿನವರು ಸಂಪೂರ್ಣ ಬೆಂಬಲವನ್ನಿತ್ತಿದ್ದರೆ ಈ ಮೇರೆಗೆ ಅಲ್ಲಿಯ ಕ್ರಾಂತಿಯು ಅಶಸ್ವಿಯಾಗುತ್ತಿರಲಿಲ್ಲ. ಆದರೆ ಆ ಕಾಲಕ್ಕೆ ಬಂಡವಲುಗಾರರ ಸಂಪೂರ್ಣ ಆಧೀನದಲ್ಲಿರುವ ಸಂಸ್ಥೆಯಾದ ಕ್ಯೋಮಿಂಟಿಂಗದೊಡನೆ ಸಹಕಾರ ಮಾಡುವ ಧೋರಣದಿಂದ 'ಇಂದ್ರಾಯ ತಕ್ಷಕಾಯಸ್ವಾಹಾ' ಎಂಬುವಂತೆ ಆ ಬಿಕ್ಕಟ್ಟಿನ ಕಾಲದಲ್ಲಿ ಪರಕೀಯ ಸಾಮ್ರಾಜ್ಯ ಶಾಹಿಗೆ ಸಹಾಯವನ್ನೀಯುವ ಚೀನದಲ್ಲಿಯ ಬಂಡವಲುಗಾರರಿಗಾದರೂ ಮಣ್ಣು ಮುಕ್ಕಿಸಬೇಕೆಂದು ಕಾಂ. ರಾಯರು ಕೊಟ್ಟ ಸಲುಹೆಯು ಅಮಾನ್ಯ ಮಾಡಲ್ಪಟ್ಟಿತು. ಆದರೆ ಈ ಸಂಧಿ ಸಾಧುತ್ವಧೋರಣದ ಪರ್ಯವಸಾನವು ಚೀನದಲ್ಲಿಯ ಬಂಡವಲುಗಾರರ ಕೈಯಲ್ಲಿ ಅಧಿಕಾರ ಬಂದ ಕೂಡಲೆ ಅವರು ಪರಕೀಯ ಸಾಮ್ರಾಜ್ಯಶಾಹಿಯೊಡನೆ ಮತ್ತು ತಮ್ಮ ದೇಶದಲ್ಲಿಯ ಲಷ್ಕರಿ ಸುಲತಾನರೊಡನೆ ಸಹಕಾರ್ಯಮಾಡಿ ಕೂಲಿಕಾರ ಒಕ್ಕಲಿಗರ ಚಳವಳಿಯನ್ನು ಬಗ್ಗು ಬಡಿಯುವದರಲ್ಲಾಯಿತು. ಚೀನದಲ್ಲಿಯ ಕ್ರಾಂತಿ ಯುದ್ಧದ ನಿಜವಾದ ಇತಿಹಾಸವು ಹೀಗಿರುವದು. ಮತ್ತು ಚೀನದಲ್ಲಿಯ ಅಪಯಶಕ್ಕೂ ಕಾಂ. ರಾಯರು ಹೊಣೆಗಾರರಲ್ಲ ಆದರೆ ಕಾಮ್ಯುನಿಸ್ಟ ಇಂಟರ ನ್ಯಾಶನಲ್ಲಿನ ಆ ಕಾಲದ ಅಧಿಕಾರಿ ವರ್ಗದವರ ಚಂಚಲ ಮತ್ತು ಸಂಧಿಸಾಧುತ್ವದ ಧೋರಣವೇ ಹೊಣೆಗಾರವಿರುವದು.

## ಕಮ್ಯುನಿಸ್ಟ ಇಂಟರ ನ್ಯಾಶನಲ್ಲಿನೊಡನೆ ಮತಭೇದವು.

ಚೀನದಲ್ಲಿಯ ಅಪಯಶದ ಬಳಿಕ ಕಮ್ಯುನಿಸ್ಟ ಇಂಟರ ನ್ಯಾಶನಲ್ಲದಲ್ಲಿ ಪ್ರಚಂಡವಾದ ಕೋಲಾಹಲವೆದ್ದಿತು. ಈ ಅಪಯಶದ ಕಾರಣ ಮೀಮಾಂಸೆಯನ್ನು ಮಾಡುವಾಗ ಮತಭೇದಗಳುಂಟಾಗ ಹತ್ತಿದವು ಒಂದು ಪಕ್ಷದವರ ಅಭಿಪ್ರಾಯವು 'ಬಂಡವಲುಗಾರರ ವರ್ಗವು ವಿಶ್ವಾಸಘಾತಕಿ ಇರುವದೆಂದು ಸಿದ್ಧವಾಗಿರುವದರಿಂದ ಇನ್ನು ಮುಂದೆ ಅವರೊಡನೆ ಸಹಕಾರ್ಯ ಮಾಡುವಂತಿಲ್ಲ. ಅಷ್ಟೇ

ಅಲ್ಲ ಆದರೆ ಅವರ ನೇತೃತ್ವದಲ್ಲಿದ್ದ ಸಂಸ್ಥೆಗಳಲ್ಲಿ ಕೆಲಸ ಮಾಡು ವದು ಸಹ ಇಷ್ಟವಲ್ಲ. ಅದೇವೇಳೆಗೆ ಸುಧಾರಣಾವಾದಿಗಳ ವಶದಲ್ಲಿದ್ದ ಕೂಲಿಕಾರ ಸಂಸ್ಥೆಗಳಲ್ಲಿಯೂ ಸಹ ಕೆಲಸ ಮಾಡದೆ ಇನ್ನು ಮುಂದೆ ನಿಜವಾದ ಹೋರಾಟ ಮಾಡುವ ಕೂಲಿಕಾರ ಸಂಘಗಳನ್ನು ಸ್ಥಾಪಿ ಸುವ ಹೊತ್ತು ಬಂದಿರುವದು. ಅದಕ್ಕಾಗಿ ಕೆಂಪು ಟ್ರೇಡ ಯುನಿ ಯುನ್ನುಗಳನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ಕೈಕೊಳ್ಳಬೇಕು'' ಎಂದು ಇತ್ತು. ಆದರೆ ಚೀನದಲ್ಲಿಯ ಅಪಯಶದ ಬಳಿಕ ಕಮ್ಯು ನಿಸ್ಟ ಇಂಟರ ನ್ಯಾಶನಲ್ಲ ಸಂಸ್ಥೆಯು ಒಂದು ಏಕಾಂತಿಕವಾದ ಧೋರ ಣದಿಂದ ಮತ್ತೊಂದು ಏಕಾಂತಿಕವಾದ ಧೋರಣದ ಕಡೆಗೆ ಹೋಗು ತ್ತಿದೆಂಬುದು ಕಾಂ. ರಾಯರವರಿಗೆ ಕಂಡುಬಂದಿತು. ಈ ಹೊಸ ವಿಚಾರ ಸರಣಿಗೆ ಅವರ ಸಂಪೂರ್ಣ ವಿರೋಧವಿದ್ದಿತು. ಬಂಡವಲು ಗಾರರ ನೇತೃತ್ವದಲ್ಲಿದ್ದ ಸಂಸ್ಥೆಗಳ—ಉದಾಹರಣಾರ್ಥವಾಗಿ ಹಿಂದೀ ರಾಷ್ಟ್ರೀಯ ಸಭೆ—ಪ್ರಚಂಡ ಮತ್ತು ಸಾಮುದಾಯಿಕ ಚಳವಳಿಗಳ ಸಾಧನವಿದ್ದ ಪಕ್ಷದಲ್ಲಿ ಮತ್ತು ಆ ಸಂಸ್ಥೆಗಳಲ್ಲಿ ಜನತೆಯ ಆಕಾಂಕ್ಷೆ ಗಳಿಗೆ ಚಾಲನೆ ಕೊಡಲ್ಪಡುತ್ತಿದ್ದ ಪಕ್ಷದಲ್ಲಿ ಇಂಥ ಸಂಸ್ಥೆಗಳಲ್ಲಿ ಕೆಲಸ ಮಾಡುವದು ಆವಶ್ಯಕವಿರುವದೆಂದು ಕಾಂ. ರಾಯರವರು ಸಾರಿ ಹೇಳಿ ದರು. ಅದೇ ವೇಳೆಗೆ ಬೇರೆ ಬೇರೆ ಕೂಲಿಕಾರ ಸಂಘಗಳನ್ನು ಸ್ಥಾಪಿಸುವದೆಂದರೆ ಮೊದಲೇ ಇದ್ದ ಕೂಲಿಕಾರರಲ್ಲಿ ಒಡಕು ಉಂಟು ಮಾಡುವಂತಿರುವದು. ಇದಕ್ಕಾಗಿ ಸುಧಾರಣಾವಾದಿ ಕೂಲಿ ಕಾರ ಸಂಘಗಳಲ್ಲಿಯೂ ಕೆಲಸ ಮಾಡಿ ಅದರಲ್ಲಿಯ ಸುಧಾರಣಾವಾದಿ ಮುಖಂಡರ ವಿರುದ್ಧ ಒಳಗಿನಿಂದಲೇ ಹೋರಾಡುವ ಧೋರಣವನ್ನು ಅಂಗೀಕರಿಸಲಿಕ್ಕೆ ಬೇಕೆಂಬ ಅಭಿಪ್ರಾಯವನ್ನಾದರೂ ಅವರು ಪ್ರತಿ ಪಾದಿಸಿದರು. ಆದರೆ ಕಾಂ. ರಾಯರವರ ವಿಚಾರಸರಣಿಗೆ ಕಮ್ಯು ನಿಸ್ಟ ಇಂಟರನ್ಯಾಶನಲ್ಲಿನವರು ಮಾನ್ಯತೆಯನ್ನೀಯಲಿಲ್ಲ ಮತ್ತು ಕೊನೆಗೆ ಆರನೇ ಇಂಟರ ನ್ಯಾಶನಲ್ಲ ಪರಿಷತ್ತಿನಲ್ಲಿ ಮೇಲೆ ಹೇಳಿದ ತೀವ್ರಗಾಮಿಗಳ ಧೋರಣವನ್ನೇ ಸ್ವೀಕರಿಸಲ್ಪಟ್ಟಿದ್ದರಿಂದ ಅವರಿಗೆ ಈ ಸಂಸ್ಥೆಯೊಳಗಿಂದ ಹೊರಬೀಳಬೇಕಾಯಿತು.

## ಕಮ್ಯುನಿಷ್ಟ ಇಂಟೆರನ್ಯಾಶನಲ್ ಮತ್ತು ಕಾಂ. ರಾಯರು

ಕಾಂ. ರಾಯರವರು ಕಮ್ಯುನಿಷ್ಟ ಇಂಟರ ನ್ಯಾಶನಲದಿಂದ ಹೊರಬಿದ್ದ ಬಳಿಕಾದರೂ ಅವರಬಗ್ಗೆ ನಾನಾತರದ ಸುಳ್ಳು ಸುದ್ದಿಗಳು ಹುಟ್ಟಿಸಲ್ಪಡುತ್ತಿದ್ದವು. 'ಸಂಧಿ ಸಾಧು, ವಿಶ್ವಾಸಘಾತಕಿ' ಮೊದಲಾದ ವಿಶಿಷ್ಟ ವಿಶೇಷಣಗಳು ಅವರಿಗೆ ಮೊನ್ನೆಮೊನ್ನಿನವರೆಗೆ ಹಚ್ಚಲ್ಪಡುತ್ತಿದ್ದವು ಮತ್ತು ಕೆಲವು ಉತ್ಸಾಹಿ ತರುಣರಂತು ರಾಯ ಇವರು ಸಾಮ್ರಾಜ್ಯ ವಾದಿಗಳ ಹಸ್ತಕರಿರುವರು. ಬ್ರಿಟಿಶ ಸಾಮ್ರಾಜ್ಯವಾದಿಗಳಿಂದ ಅವರಿಗೆ ವೇತನವು ದೊರೆಯುತ್ತದೆ. ಇವೇ ಮೊದಲಾದ ಅನೇಕ ತರದ ಕಲ್ಪನೆಗಳು ಸಹ ಒಳ್ಳೇ ಅಟ್ಟಹಾಸದಿಂದ ಪ್ರಸೃತ ಮಾಡುವ ಪ್ರಯತ್ನಗಳನ್ನಾದರೂ ಮಾಡುತ್ತಿದ್ದರು. ಆದರೆ ನಿಜವಾದ ಪರಿಸ್ಥಿತಿಯು ಹೇಗಿತ್ತು ? ಕಮ್ಯುನಿಷ್ಟ ಇಂಟರನ್ಯಾಶನಲ್ಲಿನವರು ಅವರ ಮೇಲೆ ಯಾವ ಆರೋಪಗಳನ್ನಿಟ್ಟರು? ಅದರ ಬಗ್ಗೆ ಕಮ್ಯುನಿಷ್ಟ ಇಂಟರ ನ್ಯಾಶನಲ್ಲಿನವರು ಮಾಡಿದ ಗೊತ್ತುವಳಿಯೆಂದರೆ, ಕಾಂ. ರಾಯ ಇವರು ಕಮ್ಯುನಿಷ್ಟ ಪಕ್ಷದಿಂದ ಈ ಮೊದಲೇ ಒಡೆದು ಹೊರಬಿದ್ದ ಬ್ರಾಂಡಲರ ಪಕ್ಷದ ವೃತ್ತಪತ್ರದಲ್ಲಿ ಲೇಖ ಬರೆದದ್ದಕ್ಕಾಗಿ ಅವರು ಕಮ್ಯುನಿಷ್ಟ ಪಕ್ಷದಿಂದ ತಮಗೆ ವಿಭಕ್ತ ಮಾಡಿಕೊಂಡಿರುವರು. ಇಷ್ಟೇ ಇಂಟರನ್ಯಾಶನಲ್ಲಿನ ಗೊತ್ತುವಳಿ ಇರುವದು. ಅದರಲ್ಲಿ ಅವರ ಮೇಲೆ ಸಾಮ್ರಾಜ್ಯವಾದಿಗಳ' ಹಸ್ತಕದ್ದ ಆರೋಪವಿಲ್ಲ. ಅಥವಾ ಬಂಡವಲಗಾರರೊಡನೆ ಸಹಕಾರ ಮಾಡಿದ ಉಲ್ಲೇಖವಿಲ್ಲ. ಇಂಟರ ನ್ಯಾಶನಲ್ಲಿನ ಮತದಿಂದ ಅವರ ಗುನ್ಹೆಯೆಂದರೆ ಅವರು ಸ್ಟ್ಯಾಲಿನ ವಿರೋಧಿ ಪಕ್ಷದ ವರ್ತಮಾನ ಪತ್ರಗಳಲ್ಲಿ ಲೇಖಗಳನ್ನು ಬರೆದು ತಮ್ಮ ತಮ್ಮ ನಿರಪರಾಧಿತ್ವವನ್ನು ಮಂಡಿಸಿದರು. ಕಾಂ. ರಾಯರವರ ವಿರುದ್ಧ ಇಂಥ ಪ್ರಚಾರ ಮಾಡುವದರಲ್ಲಿ ತಮ್ಮ ಹಿತವಿದ್ದವರು ಬುದ್ಧಿಪೂರ್ವಕವಾಗಿ ಸಂಗತಿಗಳನ್ನು ತಮ್ಮ ಅನುಯಾಯಿಗಳಿಂದ ಮುಚ್ಚಿಟ್ಟರು.

## ಕಾಂ. ರಾಯುರವರ ಹೇಳಿಕೆ—

ಕಾಂ. ರಾಯುರವರು ಬ್ರ್ಯಾಂಡಲರರ ಪತ್ರಗಳಲ್ಲಿ ಲೇಖಗಳನ್ನು ಬರೆಯುವ ಕಾರಣವನ್ನು ನೋಡಿದರೆ ಇಷ್ಟು ಸಾಧಾರಣವಾದ ಗುನ್ಹೆಯ ಬಗ್ಗೆ ಆ ಸಂಘ ಧುರೀಣರಿಗೆ ಪದಚ್ಯುತ ಮಾಡುವ ಇಂಟರ ನ್ಯಾಶನಲ್ಲಿನ ಅಧಿಕಾರಿಗಳ ವರ್ತನದ ಬಗ್ಗೆ ಆಶ್ಚರ್ಯವೆನಿಸದಿರದು. ನಿಜವಾದ ಪರಿಸ್ಥಿತಿಯೆಂದರೆ ಆರನೆಯ ಅಂತರರಾಷ್ಟ್ರೀಯ ಪರಿಷತ್ತಿನ ಕಾಲಕ್ಕೆ ಕಾಂ. ರಾಯುರವರು ಬೇನೆಯಿಂದ ಅತ್ಯಂತ ಅಸ್ವಸ್ಥರಿದ್ದರು. ಆದ್ದರಿಂದ ಅವರ ಅಂಬೋಣವು ಪರಿಷತ್ತಿನ ಮುಂದೆ ಬರುವದು ಸಾಧ್ಯವಾಗಲಿಲ್ಲ ಆ ಪರಿಷತ್ತಿನಲ್ಲಿ ಸ್ವೀಕರಿಸಲ್ಪಟ್ಟ ಏಕಾಂತಿಕ ಧೋರಣವು ಕಾಂ. ರಾಯುರವರಿಗೆ ಅಮಾನ್ಯವಿದ್ದದರಿಂದ ಅವರು ಆದರಲ್ಲಿ ತಪ್ಪುಗಳನ್ನು ತೋರಿಸಿಕೊಡುವದಕ್ಕಾಗಿ ಕಾಂ. ರಾಯುರವರು ಲೇಖಗಳನ್ನು ಬರೆದರು. ಮತ್ತು ಇಂಟರ ನ್ಯಾಶನಲ್ಲಿನ ಅಧಿಕೃತ ವೃತ್ತಪತ್ರಿಕೆಗಳಲ್ಲಿ ತಮ್ಮ ಅಂಬೋಣವನ್ನು ಮಂಡಿಸುವ ಉದ್ದೇಶದಿಂದ ಅದನ್ನು ಪ್ರಸಿದ್ಧಿಸಬೇಕೆಂದು ವಿನಂತಿ ಮಾಡಿದರು. ಅವರ ಈ ಅಲ್ಪ ಬೇಡಿಕೆಯು ಸಹಿತ ಅಲ್ಲಗಳೆಯಲಾಯಿತು. ಆದರೆ ಕಾಂ. ರಾಯುರವರು ಒಂದು ವರ್ಷದ ವರೆಗೆ ತಮ್ಮ ಲೇಖಗಳು ಇಂಟರ ನ್ಯಾಶನಲ್ಲಿನ ಅಧಿಕೃತ ಪತ್ರಗಳಲ್ಲಿ ಪ್ರಸಿದ್ಧವಾಗಬಹುದೆಂದು ನಿರೀಕ್ಷಿಸಿದರು ಆದರೆ ತಮ್ಮ ವಿಚಾರಸರಣಿಯು ಜನರ ಕಣ್ಮುಂದೆ ಬರಬಾರದೆಂದು ಇಂಟರ ನ್ಯಾಶನಲ್ಲಿನವರು ಬುದ್ಧಿಪೂರ್ವಕವಾಗಿ ಪ್ರಯತ್ನಿಸುತ್ತಿರುವದನ್ನು ನೋಡಿಯೇ ಕೇವಲ ನಿರುಪಾಯದಿಂದ ಅವರು ತಮ್ಮ ವಿಚಾರಗಳನ್ನು ಬ್ರ್ಯಾಂಡಲರ ಪಕ್ಷದ ವೃತ್ತಪತ್ರಗಳಲ್ಲಿ ಲೇಖನಗಳನ್ನು ಬರೆದು ಜನರೆದುರಿಗೆ ಮಂಡಿಸಿದರು. ಮತ್ತು ಇದೇ ಗುನ್ಹೆಯಗೋಸ್ಕರ ಅವರಿಗೆ ತಮ್ಮ ಸ್ಥಾನದಿಂದ ಚುತವಾಗಬೇಕಾಗಿ ಅವರ ವಿರುದ್ಧ ನಾನಾತರದಿಂದ ಟೀಕೆಗಳಾಗಹತ್ತಿದವು. ಇದೇ ಸುಮಾರಕ್ಕೆ ಪಂ. ಜವಾಹರಲಾಲರು ತಮ್ಮ ಯುರೋಪಿನ ಪ್ರವಾಸದಲ್ಲಿ ರಶಿಯಾಕ್ಕೆ ಹೋದಾಗ ಮಾಸ್ಕೋದಲ್ಲಿ ಅವರು ಕಾಂ.

ರಾಯರವರಿಗೆ ಭೆಟ್ಟಿಯಾಗಿದ್ದರು. ಸುಮಾರು ಅರ್ಧಗಂಟೆಯ ವರೆಗೆ ಇವರಿಬ್ಬರ ಸಂದರ್ಶವಾಗಿ ಹಿಂದುಸ್ಥಾನದಲ್ಲಿಯ ಪರಿಸ್ಥಿತಿಯಲ್ಲಿ ಸಾಮ್ಯವಾದದ ಪ್ರಸಾರಮಾಡುವ ವಿಷಯವಾಗಿ ಅವರಲ್ಲಿ ಚರ್ಚೆಯಾಗಿತ್ತು. ಕಾಂ. ರಾಯರೊಡನೆ ಪಂ. ಜವಾಹರಲಾಲರ ಇದೇ ಪ್ರಥಮ ದರ್ಶನವು. ತಮ್ಮ ಆತ್ಮಚರಿತ್ರೆಯಲ್ಲಿ ಕಾಂ. ರಾಯರವರ ವಿಷಯವಾಗಿ ಬರೆಯುವಾಗ್ಗೆ ಪಂ ಜವಾಹಿರಲಾಲರು ಯುರೋಪಖಂಡದಲ್ಲಿ ಗಡಿಪಾರ ಮಾಡಲ್ಪಟ್ಟ ಅನೇಕ ಹಿಂದೀ ಕ್ರಾಂತಿಕಾರರು ತಮಗೆ ಭೆಟ್ಟಿಯಾಗಿದ್ದರೂ ಕಾಂ. ಎಂ ಎನ್. ರಾಯರವರಷ್ಟು ಬೌದ್ಧಿಕ ಪ್ರಭಾವವು ಮತ್ತಾರದೂ ಬೀಳಲಿಲ್ಲವೆಂದು ಬರೆದಿದ್ದಾರೆ.

ರಶಿಯಾದಲ್ಲಿಯ ತೀವ್ರಗಾಮಿಗಳು ಕಾಂ. ರಾಯರ ಮೇಲೆ ನಾನಾತರದ ಆರೋಪಗಳನ್ನು ಹೊರಿಸಿ ಅವರೊಡನೆ ಅಸಹಕಾರವನ್ನು ಪ್ರಾರಂಭಿಸಿದ್ದರಿಂದ ಅವರು ಅಲ್ಲಿಂದ ಹೊರಟು ಜರ್ಮನಿ ದೇಶಕ್ಕೆ ಬಂದರು. ಜರ್ಮನಿಯಲ್ಲಿ ಅವರು ಸುಮಾರು ಒಂದು ವರ್ಷದವರೆಗೆ ಅಜ್ಞಾತವಾಸದಲ್ಲಿಯೇ ಇದ್ದರು.

ಆರನೆ ಅಂತರರಾಷ್ಟ್ರೀಯ ಪರಿಷತ್ತು ಮುಗಿದ ಬಳಿಕ ಜಾಗತಿಕ ಕೂಲಿಕಾರ ಚಳವಳಿಯಲ್ಲಿ ಏಕಾಂತಿಕ ಧೋರಣದ ಅವಲಂಬನೆಯು ಮಾಡಲಾಯಿತು ಹಿಂದುಸ್ಥಾನದಲ್ಲಿಯಾದರೂ ಕೂಲಿಕಾರ ಪಕ್ಷದ ತೀವ್ರಗಾಮಿಗಳು ರಾಷ್ಟ್ರೀಯ ಸಭೆಯು ಬಂಡವಲುಗಾರರ ಪಕ್ಷದ್ದಿರುವದೆಂಬ ಘೋಷಣೆಯಾಗಹತ್ತಿತು. ೧೯೩೦-೩೨ನೇ ಇಸ್ವಿಯ ಸ್ವಾತಂತ್ರ್ಯ ಯುದ್ಧದಲ್ಲಿ ಸಾವಿರಾರು ಜನರು ಸಾಮ್ರಾಜ್ಯವಾದಿಗಳ ಕಾರಾಗೃಹಗಳಲ್ಲಿ ಕೊಳೆಯುತ್ತ ಬಿದ್ದಿರುವಾಗ ಮತ್ತು ಲಾಠೀ ಹೊಡತಕ್ಕೆ ಹಾಗೂ ಗುಂಡಿನ ಸುರಿಮಳೆಗೆ ತುತ್ತಾಗುತ್ತಿರುವಾಗ ರಾಷ್ಟ್ರೀಯ ಸಭೆಯು ಸಾಮ್ರಾಜ್ಯವಾದಿಗಳ ಹಸ್ತಕವಾಗಿರುವದೆಂಬ ಘೋಷಣೆಗಳ ಕೆಂಪು ನಿಶಾನಿಯ ಕಮ್ಯುನಿಸ್ಟ ಮುಖಂಡರು

ಮಾಡಹತ್ತಿದರು. ಇದರ ಪರಿಣಾಮದಿಂದ ರಾಷ್ಟ್ರೀಯ ಸಭೆ ಯಿಂದ ಕೂಲಿಕಾರರು ವಿಭಕ್ತರಾಗಹತ್ತಿದರು ಮತ್ತು ಕೂಲಿಕಾರ ಸಂಘಗಳಲ್ಲಿ ಒಡಕುಗಳುಂಟಾಗುತ್ತ ನಡೆದವು. ಮತ್ತು ಬಂಡು ವಲಗಾರರ ಹಾಗೂ ಸಾಮ್ರಾಜ್ಯವಾದಿಗಳ ಇಮ್ಮಡಿ ದಾಳಿ ಯಿಂದ ಕೂಲಿಕಾರ ವರ್ಗವು ಚದುರಿ ಹೋಗಹತ್ತಿತು. ಕಾಂ. ರಾಯರು ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲಿ ಸ್ವಸ್ಥ ಕೂಡುವದು ಶಕ್ಯ ವಿರಲಿಲ್ಲ. ಅವರ ಈಗ ತಮ್ಮ ಕಾರ್ಯವು ಜರ್ಮನಿಯಲ್ಲಿರದೆ ಹಿಂದುಸ್ಥಾನದಲ್ಲಿರುದೆಂದು ನಿಶ್ಚಯಿಸಿ ಅವರು ಗುಪ್ತ ರೀತಿಯಿಂದ ಹಿಂದುಸ್ಥಾನಕ್ಕೆ ಬರಲು ಹೊರಟರು. ಅದರ ಮೇಲೆ ೧೯೨೪ ನೇ ಇಸ್ವಿಯ ಕಾನಪೂರ ಒಳಸಂಚಿನ ಖಟ್ಲೆಯಲ್ಲಿ ಹೊರಟ ವಾರಂಟು ಇನ್ನೂ ಜೀವಂತವಿರುವದರಿಂದ ಅವರು ಈಗಲೇ ಹಿಂದುಸ್ಥಾನಕ್ಕೆ ಹೋಗಬಾರದೆಂದು ಪರದೇಶದಲ್ಲಿಯ ಅವರ ಎಲ್ಲ ಮಿತ್ರರು ಹಾಗು ಅಂತಚಿಂತಕರು ಅವರಿಗೆ ಅವರ ನಿಶ್ಚಯದಿಂದ ಪರಾವೃತ್ತ ಮಾಡುವ ಪ್ರಯತ್ನ ಮಾಡಿದರು. ಅಲ್ಲದೆ ಪಂ. ಮೋತಿಲಾಲ ನೆಹರುಗಳಂಥ ಹಿಂದುಸ್ಥಾನದಲ್ಲಿಯ ಅವರ ಮಿತ್ರರೂ ಸಹ ಅವರು ಈಗಲೇ ಹಿಂದು ಸ್ಥಾನಕ್ಕೆ ಬರಬಾರದೆಂದು ಅವರಿಗೆ ಸಲಹೆಗಳನ್ನು ಕೊಟ್ಟರು. ಸ್ವತಃ ಕಾಂ. ರಾಯರವರಿಗೂ ಸಹ ಈಗ ಹಿಂದುಸ್ಥಾನಕ್ಕೆ ತಾವು ಹೋದ ಪಕ್ಷದಲ್ಲಿ ಈ ಹಿಂದುಸ್ಥಾನ ಸರಕಾರದವರು ತಮ್ಮ ಅವಸ್ಥೆ ಯಾವ ಬಗೆಯಿಂದ ಮಾಡುವರೆಂಬುದರ ಸಂಪೂರ್ಣ ಕಲ್ಪನೆ ಇದ್ದಿತು. ಆದರೂ ಕಾಂ. ರಾಯರವರು ಹಿಂಜರಿಯದೆ ತಮ್ಮ ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಹೆಣಗಾಡಲು ಬದ್ಧಕಂಕಣರಾಗಿ ೧೯೩೦ ನೇ ಇಸ್ವಿಯ ಡಿಸೆಂಬರ ತಿಂಗಳಲ್ಲಿ ಡಾ. ಮಹಮೂದ ಎಂಬ ಮಹಮ್ಮದಿ ನಾಮಾಭಿಧಾನದಿಂದ ಹಿಂದುಸ್ಥಾನಕ್ಕೆ ಬಂದೇ ಶೀರಿದರು.

## ಹಿಂದುಸ್ಥಾನದಲ್ಲಿಯ ಅಜ್ಞಾತವಾಸ ಹಾಗೂ ಕಾರಾಗ್ರಹವಾಸ.

ಕಾಂ. ರಾಯರು ಹಿಂದುಸ್ಥಾನಕ್ಕೆ ಆಗಮಿಸಿದ ನಂತರದ ಅವರ ಜೀವನದ ಇತಿಹಾಸವು ಎಷ್ಟು ಕಷ್ಟಪ್ರದ ಹಾಗೂ ರೋಮಾಂಚ

ಕಾರಕವಿದೆಯೋ ಅಷ್ಟೇ ಸ್ಫೂರ್ತಿದಾಯಕವಾದರೂ ಇರುವದು. ನಾಲ್ಕೂ ದಿಕ್ಕುಗಳಿಂದ ವರ ಸುತ್ತಲು ಸಂಕಟಗಳು ಬಾಯಿ ತೆರೆದು ನಿಂತಿದ್ದವು. ಸಾಮ್ರಾಜ್ಯವಾದಿಗಳ ಪೋಲೀಸರು ಅವರ ಬೆನ್ನು ಕಾಯುತ್ತಿದ್ದರು. ಕಾಂಗ್ರೆಸ್ಸಿನ ಮುಖಂಡರು ಸಾಮ್ರಾಜ್ಯವಾದಿಗಳೊಡನೆ ಒಪ್ಪಂದ ಮಾಡುವ ಸಿದ್ಧತೆಯನ್ನು ನಡೆಸಿದ್ದರು. ಇಂಟರನ್ಯಾಶನಲ್ಲಿನ ಅನುಯಾಯಿಗಳ ಗಾಳಿಯಲ್ಲಿ ಸೋವ್ಹಿಯೆಟನ್ನು ಕಟ್ಟುವ ಮನೋರಾಜ್ಯಗಳನ್ನು ನಡೆಸಿದ್ದರು. ಮತ್ತು ಕಾಂ. ರಾಯರವರ ಮಾರ್ಗದಲ್ಲಿ ಮುಳ್ಳುಗಳನ್ನು ಹಬ್ಬಿಸುವದೇ ಅವರ ಐತಿಹಾಸಿಕ ಕಾರ್ಯವಾಗಿತ್ತು. ಇಂಥ ನಿರಾಶೆಯ ವಾತಾವರಣದಲ್ಲಿ ಅಜ್ಞಾತವಾಸದಲ್ಲಿದ್ದು ತಮ್ಮ ಮತಗಳ ಪ್ರಚಾರ ಮಾಡುವ ಕಾರ್ಯವನ್ನು ಕಾಂ. ರಾಯರವರು ಮಾತಾಡುತ್ತಿದ್ದರು. ಆದರೆ ತಮ್ಮ ಧೋರಣದ ಮೇಲೆ ಹಾಗೂ ಕಾರ್ಯ ಪದ್ಧತಿಯ ಮೇಲೆ ಅವರ ದೃಢವಿಶ್ವಾಸವಿದ್ದು ಅದಕ್ಕೆ ನಾಲ್ಕೈದು ರಾಷ್ಟ್ರಗಳಲ್ಲಿಯ ಕ್ರಾಂತಿಯುದ್ಧದಲ್ಲಿ ಪ್ರತ್ಯಕ್ಷ ಭಾಗವಹಿಸಿದ್ದರಿಂದ ದೊರೆತ ಅನುಭವದ ಜೋಡಣೆಯಿತ್ತು. ಅದಲ್ಲದೆ ಕೈ ಬೆರಳಿನ ಮೇಲೆ ಎಣಿಸುವಷ್ಟೇ ಆಗಲಿ ಆದರೆ ನಿರಪೇಕ್ಷ, ಕಳಕಳಿಯ ಮತ್ತು ಸ್ವಾರ್ಥತ್ಯಾಗಿ ತರುಣ ಕಾರ್ಯಕರ್ತರು ಅವರಿಗೆ ಅನುಯಾಯಿಗಳೆಂದು ಲಭಿಸಿದ್ದರು. ಇದೇ ಜೋರಿನ ಮೇಲೆ ಅವರು ಕಾರ್ಯ ಮಾಡಲಿಕ್ಕೆ ಪ್ರಾರಂಭಿಸಿದರು. ಮತ್ತು ಕೇವಲ ಆರು ತಿಂಗಳುಗಳಲ್ಲಿಯೇ ಕೇವಲ ಕೂಲಿಕಾರರ ಚಳವಳಿಯ ಮೇಲಷ್ಟೇ ಅಲ್ಲ ಆದರೆ ಇಡೀ ರಾಷ್ಟ್ರೀಯ ಚಳವಳಿಯ ಮೇಲೆಯೇ ಅವರು ತಮ್ಮ ಅಸಾಮಾನ್ಯವಾದ ಪ್ರಭಾವವನ್ನು ಕೆಡವಿದರು ಈ ಅವಧಿಯಲ್ಲಿ ಅವರು ಹಿಂದುಸ್ಥಾನದಲ್ಲಿಯ ಮುಖ್ಯ ಮುಖ್ಯ ಸ್ಥಳಗಳಲ್ಲಿ ಪ್ರವಾಸ ಮಾಡಿ ಪ್ರಮುಖ ಹಿಂದೀ ಮುಖಂಡರನ್ನು ಕಂಡು ಅವರೆದುರಿಗೆ ತಮ್ಮ ಕಾರ್ಯಕ್ರಮವನ್ನು ಮಂಡಿಸಿದರು. ಹಿಂದೀ ತರುಣರ ಪರಮ ಪ್ರೀತಿಗೆ ಪಾತ್ರರಾಗಿದ್ದ ತರುಣ ಮುಖಂಡರಾದ ಪಂ. ಜವಾಹಿರಲಾಲರಿಗೆ ಅಲಹಾಬಾದದಲ್ಲಿಯ ಅವರ ಆನಂದ ಭುವನದಲ್ಲಿಯೂ ಕರಾಚಿಯ ಕಾಂಗ್ರೆಸ್ಸಿ

ನಲ್ಲಿಯೂ ಭೆಟ್ಟಿಯಾಗಿ ಅವರೊಡನೆ ಕಾಂ. ರಾಯರು ಹಿಂದೀ ರಾಷ್ಟ್ರೀಯ ಚಳವಳಿಯ ಬಗ್ಗೆ ಚರ್ಚೆಯನ್ನು ಮಾಡಿದರು. ಅವರು ಕರಾಚಿ ಕಾಂಗ್ರೆಸ್ಸಿನಲ್ಲಿಯೂ ಗುಪ್ತ ರೀತಿಯಿಂದ ಆಗಮಿಸಿದ್ದರು ಅವರು ಈ ಪ್ರಕಾರವಾಗಿ ಗುಪ್ತ ರೀತಿಯಿಂದ ತಮ್ಮ ಕಾರ್ಯವನ್ನು ನಡೆಸಿ ಮುಂಬಯಿಯಲ್ಲಿ ತಮ್ಮ ಮುಖ್ಯ ಕೇಂದ್ರವನ್ನು ಮಾಡಿದ್ದರು. ೧೯೩೧ ನೇ ಇಸ್ವಿಯ ಜುಲೈ ೨೧ ೨೨ ನೇ ತಾರೀಖಿನ ಸಮಾರಕ್ಕೆ ಅವರು ಮಹಾರಾಷ್ಟ್ರದಲ್ಲಿಯು ಸಂಚಾರವನ್ನಾದರೂ ಕೈಕೊಳ್ಳಬೇಕೆಂದು ನಿಶ್ಚಯಿಸಿ ಆಮೇರೆಗೆ ಪುಣೆಯ ಸುಪ್ರಸಿದ್ಧ ಕಾಂ. ಮುಖಂಡರಾದ ಶ್ರೀ. ನ. ವಿ. ಗಾಡಗೀಳರಿಗೆ ತಿಳಿಸಿದ್ದರು. ಆದರೆ ಅದೇ ಸುಮಾರಕ್ಕೆ ಅಂದರ ೧೯೩೧ ನೆ ಇಸ್ವಿಯ ಜುಲೈ ೨೧ ನೆ ತಾರೀಖಿನ ದಿವಸ ಬೆಳಗು ಮುಂಜಾವಿನಲ್ಲಿ ಮುಂಬಯಿ ಭಾಯಖಳಾದಲ್ಲಿರುವ ನಿಲೀಸ್ಟ್ರೀಟದಲ್ಲಿಯ ಅವರ ನಿವಾಸಸ್ಥಾನಕ್ಕೆ ಸ್ವತಃ ಮುಂಬಯಿಯ ಪೋಲೀಸ ಕಮೀಶನರರು ಪೋಲೀಸ ಆಫೀಸರರ ಹಾಗೂ ಸಶಸ್ತ್ರ ಪೋಲೀಸರ ತಂಡಿನೊಂದಿಗೆ ಮುತ್ತಿಗೆ ಹಾಕಿದರು. ಕಾಂಮ್ರೆಡ್ ಮಾನವೇಂದ್ರನಾಥರು ಹೊರಗಿನ ಶಬ್ದನ್ನು ಕೇಳಿ ಬಾಗಿಲು ತೆರೆಯುವಷ್ಟ ಲ್ಲಿ ಪೋಲೀಸರು ತಮ್ಮ ಕೈಯಲ್ಲಿಯ ರಿವ್ಹಾಲ್ವರಗಳನ್ನೆಳೆದು ಅವರನ್ನು ಸ್ವಾಗತಿಸಿದರು. ಬಳಿಯ ಪೋಲೀಸ ಕಮೀಶನರರು ಅವರನ್ನು 'ಗುಡ್ ಮಾರ್ನಿಂಗ ಮಿ ರಾಯ' ನೀವು ನಮ್ಮ ಬಂಧನಲ್ಲಿರುವಿರಿ ಎಂದು ಅಭಿವಂದಿಸಿದರು

ಕಾಂ. ರಾಯರು ಶಾಂತ ರೀತಿಯಿಂದ ಪೊಲೀಸರ ಸ್ವಾಧೀನರಾದರು. ಅವರ ಬಂಧನದ ವಾರ್ತೆಯು ಕೇಳಿದೊಡನೆ ಕೇವಲ ಹಿಂದುಸ್ಥಾನದಲ್ಲಿ ಅಷ್ಟೇ ಅಲ್ಲ ಆದರೆ ಇಡೀ ಜಗತ್ತಿನಲ್ಲಿಯೇ ಕೋಲಾಹಲವೆದ್ದಿತು. ಅವರ ಬಂಧನದ ನಿಷೇಧಕ್ಕಾಗಿ ಅಲ್ಲಲ್ಲಿ 'ರಾಯಸಪ್ತಾಹ'ವು ಆಚರಿಸಲ್ಪಟ್ಟಿತು. ಈ ಸಪ್ತಾಹದಲ್ಲಿ ಮುಂಬೈಯ ಕೂಲಿಕಾರರು ಕಾಂ ರಾಯರ ಬಂಧನದ ನಿಷೇದಾರ್ಥವಾಗಿ ಸಂಪು ಹೂಡಿದ್ದರಿಂದ ಒಂದು ದಿವಸ ಮುಂಬಯಿಯಲ್ಲಿಯ ೨೧

ಗಿರಣಿಗಳು ಮುಚ್ಚಲ್ಪಟ್ಟಿದ್ದವು. ಕಾಂ. ರಾಯರವರ ಬಂಧನದ ಸುದ್ದಿಯು ಕೇಳಿದೊಡನೆ ಯುರೋಪ ಅಮೇರಿಕೆಯಲ್ಲಿಯ ಅವರ ಅನೇಕ ಕಮ್ಯುನಿಸ್ಟ ಮಿತ್ರರು ತಮ್ಮ ಸಂತಾಪವನ್ನು ವ್ಯಕ್ತ ಮಾಡಿದರು. ಸ್ವಿತ್ಸರ್ಲಂಡಿನ ಕೂಲಿಕಾರರಂತೂ ಮೆರವಣಿಗೆಗಳನ್ನು ಹೊರಡಿಸಿ ಸಾಮ್ರಾಜ್ಯ ಸರಕಾರದ ನಿಷೇಧ ಮಾಡಿದರು. ಕಾಂ. ರಾಯರಿಗೆ ಶಾಸನ ಮಾಡುವ ಸಲುವಾಗಿ ೧೯೩೨ ನೇ ಇಸ್ವಿಯ ಕಾನಪೂರ ಒಳಸಂಚಿನ ಖಟ್ಲೆಯ ಕಾನಪೂರದಲ್ಲಿ ಸ್ಪೇಶಲ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಪುನರುಜ್ಜೀವನವು ಮಾಡಲಾಯಿತು. ಮತ್ತು ೭ ತಿಂಗಳಗಳವರೆಗೆ ಗುಪ್ತ ರೀತಿಯಿಂದ ಖಟ್ಲೆಯ ನಾಟಕವನ್ನು ಮಾಡಿದ ಬಳಿಕ ಮತ್ತು ತಮ್ಮ ರಕ್ಷಣೆಯನ್ನು ಮಾಡುವ ಯಾವ ಸೌಕರ್ಯಗಳನ್ನು ಕೊಡದೆ ಕಾಂ. ಲೇನಿನ, ಟ್ರಾಟಸ್ಕಿ ಮತ್ತು ಸ್ಟ್ಯಾಲಿನ್ನರ ಈ ಸಹಕಾರಿಯ ಕೈಕಾಲಿನಲ್ಲಿ ಲೋಹ ಶೃಂಖಲೆಗಳನ್ನು ಹಾಕಿ ೧೨ ವರ್ಷದ ಕಠೋರ ಶಿಕ್ಷೆಯು ವಿಧಿಸಲ್ಪಟ್ಟಿತು. ಕಾಂ ರಾಯರ ಸಹಾಯಕ್ಕಾಗಿ ಪಂ. ಜವಾಹರಲಾಲ ನೆಹರು ಮೊದಲಾದ ಹಿಂದೀ ಮುಖಂಡರದೊಂದು ಸಮಿತಿಯು ಸ್ಥಾಪಿಸಲ್ಪಟ್ಟಿತು. ಅವರು ಕಾಂ. ರಾಯರಿಗಾದ ಕಠೋರ ಶಿಕ್ಷೆಯ ವಿರುದ್ಧ ಪರಿಷ್ಕ ಕೋರ್ಟಿನಲ್ಲಿ ಅಪೀಲು ಮಾಡಲು ಅದು ೧೨ ವರ್ಷದಿಂದ ೬ ವರ್ಷಕ್ಕಿಳಿಸಲ್ಪಟ್ಟಿತು ಸಾಮ್ರಾಜ್ಯ ಸರಕಾರದವರು ಕಾಂ. ರಾಯರವರಿಗೆ ಕಾರಾಗ್ರಹಕ್ಕೆ ಕಳಿಸಿದರೂ ಸಹ ಸ್ವಾತಂತ್ರ್ಯೋತ್ಸುಕರಾದ ಹಿಂದೀ ತರುಣರ ಮನಸ್ಸಿನಲ್ಲಿ ಈ ಮೊದಲೇ ಅವರು ತಮ್ಮ ಸಂದೇಶವನ್ನು ಬೀರಿದ್ದರಿಂದ ಅಖಿಲ ಹಿಂದುಸ್ಥಾನದಲ್ಲಿಯೂ ಸಾಮ್ಯವಾದವು ಒತ್ತರದಿಂದ ಬೆಳೆಯಹತ್ತಿ ಈಗಂತೂ ಅದರ ಪ್ರಸಾರವು ಎಷ್ಟಾಗಿದೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ.

## ಬಂಧ ಮುಕ್ತತೆ ಮತ್ತು ಕಾಂಗ್ರೆಸ್ಸಿನಲ್ಲಿ ಪ್ರವೇಶ.

ಕಾಂ. ರಾಯರಿಗೆ ಶಿಕ್ಷೆಯಾದ ಬಳಿಕ ಅವರಿಗೆ ಬರೆಲಿಯ ಸೆರೆಮನೆಯಲ್ಲಿಡಲಾಗಿತ್ತು. ತಮ್ಮ ಆಯುಷ್ಯದಲ್ಲಿಯೇ ಸುಮಾರು ೧೫

ವರ್ಷಗಳನ್ನು ಪರದೇಶಗಳಲ್ಲಿ ಕಳೆದದ್ದರಿಂದ ಕಳೆದ ಜೂನ ಜುಲೈ ತಿಂಗಳಲ್ಲಿ ಅವರ ಪ್ರಕೃತಿಯಲ್ಲಿ ಬಹಳ ಅಸ್ವಾಸ್ಥ್ಯವುಂಟಾಗಿ ಅವರ ತೂಕವು ಸುಮಾರು ೬೫ ಪೌಂಡುಗಳವರೆಗೆ ಕಡಿಮೆಯಾಗಿದ್ದರಿಂದ ಇಡೀ ದೇಶದಲ್ಲೆಲ್ಲ ಭಯಂಕರವಾದ ಕೋಲಾಹಲವುಂಟಾಯಿತು. ಅಲ್ಲಲ್ಲಿ ಸಭೆಗಳನ್ನು ಕೂಡಿಸಿ ಮತ್ತು ವೃತ್ತಪತ್ರಗಳಲ್ಲಿ ಲೇಖನಗಳನ್ನು ಬರೆದು ಅವರ ಬಂಧ ಮುಕ್ತತೆಯ ಬೇಡಿಕೆಗಳು ಮಾಡಲ್ಪಟ್ಟವು ಆದರೆ ಸರಕಾರದ ಮನಸ್ಸಿನ ಮೇಲೆ ಈ ಬೇಡಿಕೆಗಳ ಎಳ್ಳಷ್ಟು ಪರಿಣಾಮವಾಗಲಿಲ್ಲ. ಅವರ ಶಿಕ್ಷೆಯ ಅವಧಿಯು ತೀರಲು ಅತ್ಯಂತ ಅಲ್ಪ ಅವಧಿಯು ಉಳಿದಿದ್ದರೂ ಸಹ ಸರಕಾರದವರು ಕಾಂ. ರಾಯರವರ ಮುಕ್ತತೆಯನ್ನು ಮಾಡಲು ಸಿದ್ಧರಾಗಲಿಲ್ಲ. ಆದರೆ ಅವರಿಗೆ ಬರೆಲಿಯ ಜೇಲಿನಿಂದ ಡೆಹರಾಡೂನಿನ ಜೇಲಿಗೆ ಒಯ್ಯಲಾಯಿತು. ಮತ್ತು ೧೯೩೬ನೇ ಇಸ್ವಿಯ ನೊವ್ಹೆಂಬರ ೨೦ನೇ ತಾರೀಕು ಅವರ ಶಿಕ್ಷೆಯ ಅವಧಿಯು ಮುಗಿದ ಬಳಿಕ ಡೆಹರಾಡೂಂ ಜೇಲಿನಿಂದಅವರ ಮುಕ್ತತೆ ಮಾಡಲಾಯಿತು. ಅವರ ಮುಕ್ತತೆ ಕಾಲಕ್ಕೆ ಅವರನ್ನು ಸ್ವಾಗತಿಸಲು ಮುಂಬೈಯ ಸುಪ್ರಸಿದ್ಧ ಕೂಲಿಕಾರ ಪ್ರಮುಖರಾದ ಮಿ. ವ್ಹಿ. ಬಿ. ಕರ್ಣಿಕ ಡಾ. ಎಂ. ಆರ್. ಶೆಟ್ಟಿ ಮತ್ತು ಸೌ. ಮಣಿಬೇನ ಮೂಳಜಿ ಮೊದಲಾದ ಕಮ್ಯುನಿಸ್ಟ ಮುಖಂಡರು ಹಾಗೂ ಡೆಹರಾಡೂನ ಮುನಸಿಪಲ ಲೋಕಲಬೋರ್ಡಿನ ಚೆಅರಮನ್ನರಾದ ಶ್ರೀ. ಖುರಶೇದಲಾಲ, ಮುನಸಿಪಲ ಕಮೀಶನರರಾದ ಚೌದರಿ ಬಿಹಾರಿಲಾಲ ಮೊದಲಾದ ಅನೇಕ ಜನರು ಕಾರಾಗ್ರಹದ ಬಾಗಿಲಿನ ವರೆಗೆ ಹೋಗಿದ್ದರು. ಕಾಂ. ರಾಯರವರ ಮುಕ್ತತೆಯಾದ ಕೂಡಲೆ ಅವರ ಪ್ರಕೃತಿಯು ವೈದ್ಯಕೀಯ ಪರೀಕ್ಷೆ ಮಾಡಲಾಯಿತು. ಅವರ ಕರುಳಿನಲ್ಲಿಯ ಹಾಗೂ ಹೃದಯದಲ್ಲಿಯ ವಿಕಾರಗಳೂ ಇನ್ನೂ ಹಾಗೆಯೇ ಇದ್ದು ಅವರು ಬಹಳೇ ಅಶಕ್ತರಾಗಿದ್ದುದರಿಂದ ಅವರು ಕನಿಷ್ಟ ೬ ತಿಂಗಳ ಮಟ್ಟಿಗಾದರೂ ಸಂಪೂರ್ಣ ವಿಶ್ರಾಂತಿಯನ್ನು ಪಡೆಯಬೇಕೆಂದು ಸಲಹೆಯನ್ನು ಕೊಟ್ಟರು

ಆದರೆ ಕಾಂ ರಾಯರಿಗೆ ಈ ವರೆಗೂ ಸಂಪೂರ್ಣ ವಿಶ್ರಾಂತಿಯು ದೊರೆತಿರುವದಿಲ್ಲ. ಕಾರಾಗ್ರಹದಿಂದ ಹೊರಬಿದ್ದ ಕೂಡಲೆ ಅವರು ಕಾಂಗ್ರೆಸ್ಸಿನ ಪ್ರತಿಜ್ಞಾಪತ್ರದ ಮೇಲೆ ಸಹಿಯನ್ನು ಮಾಡಿ ಕಾಂಗ್ರೆಸ ಸಭಾಸದರಾದರೂ ಇಷ್ಟೇ ಅಲ್ಲ ಕಾಂಗ್ರೆಸ್ಸಿನ ಹೊರಗೆ ನಿಂತು ಕೆಲಸ ಮಾಡುವ ಸಮತಾ ವಾದಿಗಳಾದರೂ ಕಾಂಗ್ರೆಸ್ಸಿನಲ್ಲಿಯೇ ಸೇರ ಬೇಕೆಂದು ಅವರು ಪ್ರಕಟನೆಗಳನ್ನು ಹೊರಡಿಸಿದರು. ತನ್ನು ಮುಕ್ತತೆಯಾದ ಕೂಡಲೆ ಕಾಂ. ರಾಯರು ಹಿಂದೀ ಜನತೆಗೆ ಕೆಳಗಿನ ಸಂದೇಶವನ್ನು ಕೊಟ್ಟರು.

"೨೦ ವರ್ಷಗಳಿಂದಲೂ ನನ್ನ ಮಾತೃ ದೇಶದ ಸಹೋದರ ರನ್ನು ಕಾನೂನು ಬದ್ಧ ರೀತಿಯಿಂದ ನೋಡಲು ಅವಕಾಶ ದೊರೆತಿ ರುವುದು ಇದೇ ಮೊದಲನೆಯ ಸಾರಿ ನನ್ನ ಸಹೋದರರಿಗೆ ಒಂದೆ ರಡು ಮಾತುಗಳನ್ನು ತಿಳಿಸಲು ನಾನು ಸಂತೋಷಪಡುತ್ತೇನೆ. ನ್ಯಾಶನಲ್ ಕಾಂಗ್ರೆಸ್ಸಿನ ಧ್ವಜದ ಕೆಳಗೆ ಕೋಟ್ಯಾಂತರ ಜನರು ನಿಂತು ಸ್ವಾತಂತ್ರ್ಯ ಯುದ್ಧವನ್ನು ನಡೆಸುವುದೇ ನಾನು ಭಾರತೀಯರಿಗೆ ಕೊಡುವಂತಹ ಸಂದೇಶ ಸಂಪೂರ್ಣ ಸ್ವಾತಂತ್ರ್ಯವನ್ನು ಸಾಧಿಸುವದಕ್ಕಾಗಿ ನಾವು ಅತಿ ಸ್ಪಷ್ಟವಾದ ರೀತಿಯ ದೃಷ್ಟಿಯಿಂದರಬೇಕು. ಅಲ್ಲದೆ ಸರಿಯಾದ ಕಾರ್ಯಕ್ರಮ ವನ್ನೂ ಹೊಂದಿರಬೇಕು. ಸ್ವಾತಂತ್ರ್ಯ ಸಾಧನೆಗಾಗಿ ನಾವು ಕೈಕೊ ಳ್ಳಬೇಕಾದ ನಿಬಂಧನಾಪೂರಿತ ಕಾರ್ಯಕ್ರಮಕ್ಕಾಗಿ ನಾವು ಬಹಳ ಮಟ್ಟಿಗೆ ಪ್ರಯತ್ನಿಸಬೇಕು. ಇಂದು ನಮ್ಮ ಮುಂದೆ ಇರುವ ಮುಖ್ಯ ಪ್ರಶ್ನೆಯು ಸೋಷಿಯಲಿಸಂ ಅಥವಾ ಕಮ್ಯೂನಿಸಂ ಅಲ್ಲ ಸೋಷಿಯ ಲಿಸ್ಟರೂ ಮತ್ತು ಕಮ್ಯೂನಿಸ್ಟರೂ ಮೊದಲು ಸ್ವಾತಂತ್ರ್ಯ ಸಾಧನೆ ಯಾಗಬೇಕೆಂಬ ಅಂಶವನ್ನು ಗಮನದಲ್ಲಿಡಬೇಕು. ಎಲ್ಲಾ ಸಾಮ್ರಾಜ್ಯ ವಿರೋಧ ಶಕ್ತಿಗಳನ್ನೆಲ್ಲಾ ಒಂದುಗೂಡಿಸಿ ಪ್ರಜೆಗಳಿಗಾಗಿ ಪ್ರಜೆಗಳ ಸರಕಾರಬೇಕೆಂಬ ಪ್ರಜಾ ಸತ್ತಾತ್ಮಕ ಕೂಗನ್ನು ಆಚರಣೆಗೆ ತರ ಬೇಕು. ನಮಗೆಲ್ಲಾ ನ್ಯಾಷನಲ್ ಕಾಂಗ್ರೆಸ್ಸೇ ಸರಿಯಾದ ವೇದಿಕೆ ಯೆಂದು ತಿಳಿಯಬೇಕು. ಆ ಸಂಸ್ಥೆಯನ್ನು ಇನ್ನೂ ಹೆಚ್ಚು ಪ್ರಜಾ

ಸತ್ತಾತ್ಮಕವಾದುದನ್ನಾಗಿಯೂ ಉಗ್ರವಾದಿಯಾದುದನ್ನಾಗಿಯೂ ಮಾಡಬೇಕು ಈ ಸಂದರ್ಭದಲ್ಲಿ ನಾನು ಎಲ್ಲಾ ರೈತರುಗಳ ಮತ್ತು ಕೆಲಸಗಾರರುಗಳ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿಗೆ ಅಭಿನಂದನೆಯನ್ನರ್ಪಿಸುತ್ತೇನೆ."

ಕೇವಲ ಈ ಪ್ರಕಾರದ ಸಂದೇಶವನ್ನು ಕೊಟ್ಟು ಕಾಂ. ರಾಯರವರು ಸ್ವಸ್ಥ ಕೂಡಲಿಲ್ಲ. ಆದರೆ ಕೂಡಲೆ ಅವರು ತಮ್ಮ ಪ್ರಕೃತಿಸ್ವಾಸ್ಥ್ಯದ ಕಡೆಗೂ ಲಕ್ಷಕೊಡದೆ ಪಂ. ಜವಾಹರಲಾಲ ಮೊದಲಾದ ಮುಖಂಡರನ್ನು ಕಂಡು ಕಾಂಗ್ರೆಸ್ಸಿನ ಪ್ರಚಾರ ಕಾರ್ಯವನ್ನಾರಂಭಿಸಿದರು. ಅವರು ಡೆಹರಾಡೂನ ಕಾಂಗ್ರೆಸ ಕಮೀಟಿಯ ಪರವಾಗಿ ಆಲ ಇಂಡಿಯಾ ಕಾಂಗ್ರೆಸ ಕಮಿಟಿಯ ಸಭಾಸದರೆಂದು ಆರಿಸಲ್ಪಟ್ಟಿದ್ದು ಕಳೆದ ಡಿಸೆಂಬರ ತಿಂಗಳಲ್ಲಿ ಕೂಡಿದ ಫೈಜಪೂರ ಕಾಂಗ್ರೆಸ್ಸಿನಲ್ಲಿ ಮಹತ್ವದ ಭಾಗವನ್ನು ವಹಿಸಿದ್ದರು. ಅದರ ಪ್ರಯತ್ನದಿಂದಲೇ ಈಗ ಕಾಂಗ್ರೆಸ್ಸಿನ ಸಂಬಂಧವು ಒಕ್ಕಲಿಗರು ಹಾಗೂ ಕೂಲಿಕಾರ ಮೊದಲಾದ ಹಿಂದುಸ್ತಾನದಲ್ಲಿಯ ಶ್ರಮಜೀವಿ ಬಹುಸಮಾಜದೊಡನೆ ಹೆಚ್ಚೆಚ್ಚು ಬೆಳೆಯುತ್ತಲಿದೆ. ಕಾಂಗ್ರೆಸ್ಸಿನ ಅಧಿವೇಶನವು ಮುಗಿದ ಬಳಿಕ ಕಾಂ. ರಾಯರು ಡಾಕ್ಟರರ ಸಲಹೆಯ ಮೇರೆಗೆ ಸುಮಾರು ೧೫ ದಿನಗಳ ವರೆಗೆ ಮಾಥೆರಾನದಲ್ಲಿ ವಿಶ್ರಾಂತಿಯನ್ನು ಪಡೆದು ಆ ಬಳಿಕ (ಅವರಿಗಿನ್ನೂ ಸಂಪೂರ್ಣ ವಿಶ್ರಾಂತಿಯ ಅವಶ್ಯಕತೆ ಇದ್ದರೂ ಸಹ) ಈಗ ಅವರು ಮತ್ತೆ ಜನತೆಯಲ್ಲಿ ಕಾಂಗ್ರೆಸ್ಸಿನ ಸಂದೇಶವನ್ನು ಬೀರುವದಕ್ಕಾಗಿ ಸಂಚಾರಕ್ಕೆ ಹೊರಟಿದ್ದಾರೆ. ಅವರು ಮಹಾರಾಷ್ಟ್ರದಲ್ಲಿಯ ತಮ್ಮ ಪ್ರವಾಸವನ್ನು ಮುಗಿಸಿ ಈಗ ಕರ್ನಾಟಕಕ್ಕೆ ಆಗಮಿಸಿದ್ದಾರೆ. ಪುಣೆ, ಸೋಲಾಪುರ ಮೊದಲಾದ ಸ್ಥಳಗಳಲ್ಲಿ ಸಾಮ್ರಾಜ್ಯ ಸರಕಾರದವರು ಮತ್ತು ಅವರ ಹಸ್ತಕರು ಕಾಂ. ರಾಯರವರ ಭಾಷಣದ ಸಭೆಗಳಿಗೆ ಸ್ಥಳ ಕೊಡುವದಕ್ಕೆ ಸಹ ಸಮ್ಮತಿಯನ್ನೀಯಲಿಲ್ಲ. ಆದರೆ ಸಾವಿರಾರು ಸ್ವಾತಂತ್ರ್ಯೋತ್ಸುಕ ಜನರು ಸಾಮ್ರಾಜ್ಯವಾದಿಗಳು ಉದ್ಭವಿಸಿದ ತೊಂದರೆಗಳಿಂದ ಮಾರ್ಗ ತೆಗೆದು ಕಾಂ. ರಾಯರವರ ಸ್ಫೂರ್ತಿದಾಯಕ ಸಂದೇಶವನ್ನು ಕೇಳುವ

ಸುಸಂಧಿಯನ್ನು ಪಡೆಯದಿರಲಿಲ್ಲ. ತಮ್ಮ ಸಂಚಾರವನ್ನು ಮುಗಿಸಿದ ಬಳಿಕ ಅವರು ಮುಂದಿನ ಮಾರ್ಚ ೧ನೇ ತಾರೀಖಿನಿಂದ ಪ್ರಗತಿ ಪರ ಲೋಕಸತ್ತಾವಾದಿ ವಿಚಾರಗಳನ್ನು ಪ್ರದರ್ಶಿಸುವದಕ್ಕಾಗಿಯೂ ಮತ್ತು ರಾಷ್ಟ್ರೀಯ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಮುಕ್ತಿಯ ಧ್ಯೇಯವನ್ನು ಸಾಧ್ಯಗೊಳಿಸುವದಕ್ಕಾಗಿಯೂ ರಾಜಕೀಯ ಚಳವಳಿಯನ್ನು ಮಾಡುವ ಉದ್ದೇಶದಿಂದ 'ಇಂಡಿಪೆಂಡೆಂಟ ಇಂಡಿಯಾ' (ಸ್ವತಂತ್ರ ಭಾರತ) ವೆಂಬದೊಂದು ಸಾಪ್ತಾಹಿಕ ವೃತ್ತಪತ್ರಿಕೆಯನ್ನು ಹೊರಡಿಸತಕ್ಕವರಿದ್ದಾರೆ. ಆದರೆ ಹಿಂದೀ ಸ್ವಾತಂತ್ರ್ಯದ ಸಲುವಾಗಿ ಅವರು ತಮ್ಮ ಎಲ್ಲ ಆಯುಷ್ಯವನ್ನು ಕಳೆದಿದ್ದರಿಂದ ಅವರ ಹತ್ತಿರ ಈ ಪತ್ರಿಕೆಯನ್ನು ನಡೆಯಿಸಲಿಕ್ಕೆ ವ್ಯಕ್ತಿಗತ ಸಂಪತ್ತಿಯು ಇರುವದಿಲ್ಲ ಆದ್ದರಿಂದ ಈ ಕಾರ್ಯದ ಬಗ್ಗೆ ಸಹಾನುಭೂತಿಯುಳ್ಳ ಜನರಿಂದ ಅವರು ಆರ್ಥಿಕ ಸಹಾಯ್ಯವನ್ನಪೇಕ್ಷಿಸುತ್ತಿರುವರು.

## ಅಸಾಧಾರಣವಾದ ವ್ಯಕ್ತಿಯುತ್ವ ಮುತ್ತು ವಕ್ತೃತ್ವ

ಕಾಂ. ರಾಯ ಇವರು ವ್ಯೈಕಟ್ಟಿನಿಂದ ಅತ್ಯಂತ ಸದೃಢರಿದ್ದು ಅವರ ಎತ್ತರವು ೬ ಫೂಟು ೩ ಇಂಚು ಇರುವದು ಅವರ ತೇಜಸ್ವಿ ದೃಷ್ಟಿಯಿಂದಲೂ ಮತ್ತು ಧೀರ ಗಂಭೀರ ಮುದ್ರೆಯಿಂದಲೂ ಅವರನ್ನು ನೋಡಿದ ಕೂಡಲೆ ಜನರ ಮನಸ್ಸಿನ ಮೇಲೆ ಅವರ ವ್ಯಕ್ತಿತ್ವದ ಪ್ರಭಾವವು ಬೀಳುತ್ತದೆ. ಕಾಂ. ರಾಯರಲ್ಲಿಯ ಉಳಿದ ಎಷ್ಟೋ ಮಹತ್ತರವಾದ ಗುಣಗಳಿಂದಲೂ ಅವರ ಪ್ರತಿಪಕ್ಷಿಯರಲ್ಲಿಯೂ ಅವರ ಬಗ್ಗೆ ಆದರ ಉಂಟಾಗುತ್ತದೆ. ಆತ್ಮವಿಶ್ವಾಸ, ಕಾರ್ಯನಿಷ್ಟೆ ಮತ್ತು ಯಾವದೇ ಬಿಕ್ಕಟ್ಟಿನ ಪರಿಸ್ಥಿತಿಯೊಡನೆ ಹೋರಾಡಲಿಕ್ಕೆ ಸಿದ್ಧವಿದ್ದ ಮನೋಧೈರ್ಯವು ಅವರಲ್ಲಿರುವದರಿಂದ ಎಂಥಸಂಕಟಗಳು ಬಂದರೂ ಸಹ ಅವರು ಕೈಕೊಂಡ ಕಾರ್ಯದಿಂದ ಚ್ಯುತರಾಗುವದಿಲ್ಲ. ಹಿಂದುಸ್ತಾನದಲ್ಲಿ ಪ್ರಚಲಿತವಿದ್ದ ವಕ್ತೃತ್ವ ಪದ್ಧತಿಯು ಅವರಲ್ಲಿರದಿದ್ದರೂ ಅವರ ಭಾಷಣ ಪದ್ಧತಿಯ ಸಕಲ ನಿಸ್ಪೃಹ ಮತ್ತು ಮರ್ಮಭೇದಕ

ವಿರುವದು. ಸಾವಕಾಶವಾಗಿ, ವಿಚಾರಪೂರ್ವಕವಾಗಿ ಮಾತಾಡು ವದು ಮತ್ತು ಶ್ರೋತೃವರ್ಗದ ಮೇಲೆ ಅದರ ಪರಿಣಾಮವೇನಾಗುತ್ತ ದೆಂಬುದನ್ನು ನೋಡಿ ಮತ್ತೆ ಮಾತಾಡಲಿಕ್ಕೆ ಪ್ರಾರಂಭಿಸುವದು ಈ ಪ್ರಕಾರ ಅವರ ಭಾಷಣ ಪದ್ಧತಿಯಿರುವದು. ಇದರಿಂದ ಕೆಲವರಿಗೆ ಅವರ ಭಾಷಣವು ಸೇರುವದಿಲ್ಲ. ಆದರೆ ಅವರ ಶಾಸ್ತ್ರಶುದ್ಧ ವಿಚಾರ ಸರಣಿಯು, ಸ್ಪಷ್ಟವಾದ ಕಲ್ಪನೆಗಳು ಮತ್ತು ಅವುಗಳನ್ನು ನಿರ್ಭಯ ತೆಯಿಂದ ಮಂಡಿಸುವ ಪದ್ಧತಿಯಿಂದ ವಿಚಾರವಂತ ಜನರ ಮೇಲೆ ಮಾತ್ರ ಅವರ ಭಾಷಣದ ಪರಿಣಾಮವಾಗದಿರುವದಿಲ್ಲ.

## ಗ್ರಂಥಲೇಖನ

ಅವರ ಬುದ್ಧಿ ಮತ್ತೆಯಾದರೂ ಅಸಾಧಾರಣವಿದ್ದು ಅವರು (ವಿಶ್ವವಿದ್ಯಾಲಯಿನ ಶಿಕ್ಷಣವನ್ನು ಪಡೆಯದಿದ್ದರೂ ಸಹ) ೧೯೨೦-೨೨ನೇ ಇಸ್ವಿಯ ಅಸಹಕಾರ ಚಳವಳಿಯ ಬಗ್ಗೆ "ಹಿಂದೀ ರಾಜಕಾರಣವೆಂಬದೊಂದು ಗ್ರಂಥವನ್ನೂ ಹಾಗೂ ಚೀನ ದೇಶದ ಕ್ರಾಂತಿಯ ಕಾಲಕ್ಕೆ 'ಕ್ರಾಂತಿ ಮತ್ತು ಪ್ರತಿಕ್ರಾಂತಿ' ಎಂಬದೊಂದು ಅಮೂಲ್ಯವಾದ ಪುಸ್ತಕವನ್ನು ಬರೆದಿದ್ದು ಹಿಂದುಸ್ತಾನದಲ್ಲಿಯ ನಮ್ಮ ಕಾರ್ಯವೆಂಬ ಪುಸ್ತಕವಾದರೂ ಅವರು ಬರೆದಿದ್ದರು. ಈ ಪುಸ್ತಕ ಗಳಲ್ಲದೆ ಅವರು ಕಾರಾಗ್ರಹದಲ್ಲಿದ್ದ ಕಾಲಕ್ಕೆ ಅವರು ಸುಮಾರು ೨೦೦೦ ಮುದ್ರಿತ ಪುಟಗಳಾಗುವಷ್ಟು ಲೇಖನವನ್ನು ಮಾಡಿರುವರು. ಧರ್ಮ, ಶಾಸ್ತ್ರ ಮತ್ತು ತತ್ವಜ್ಞಾನದ ಅವರ ಎಲ್ಲ ಲೇಖನವು ಐದು ದೊಡ್ಡ ಗ್ರಂಥಗಳಲ್ಲಿ ಪ್ರಸಿದ್ಧಿಸುವಷ್ಟಾಗಿರುವದೆಂದು ತಿಳಿಯುತ್ತದೆ. ಈಗ ಜಪ್ತಾಗಿರುವ ಅವರ ಪುಸ್ತಕಗಳನ್ನು ಹಿಂದಕ್ಕೆ ಯಾರು ಓದಿರು ವರೋ ಅವರಿಗೆ ರಾಯರವರ ತಾತ್ವಿಕ ಲೇಖನದ ಉಚ್ಚ ಮತ್ತು ಮೂಲಗ್ರಾಹಿ ಗುಣದ ಬಗ್ಗೆ ವಿಶೇಷವೇನೂ ಹೇಳುವ ಕಾರಣವಿಲ್ಲ. ಈಗ "ಆಧುನಿಕ ಆಧಿಭೌತಿಕ ಶಾಸ್ತ್ರದ ಸಾತ್ವಿಕ ಪರಿಣಾಮ"ವೆಂಬ ಹೆಸರಿನ ಮೊದಲನೆ ಗ್ರಂಥವು ಮುದ್ರಣಕ್ಕಾಗಿ ಸಿದ್ಧವಾಗಿದ್ದು ಅದನ್ನು ಕ್ಷಿಪ್ರದಲ್ಲಿಯೇ ಪ್ರಸಿದ್ಧಿಸಬೇಕೆಂದು ಅವರ ವಿಚಾರವಿರುವದು. ಈ

ಪುಸ್ತಕವನ್ನು ಪ್ರಸಿದ್ಧಿಸುವದಕ್ಕಾಗಿ ಎಷ್ಟೋ ಅಮೇರಿಕನ ಮತ್ತು ಇಂಗ್ಲೀಷ ಕಂಪನಿಗಳ ಬೇಡಿಕೆಗಳು ಬಂದಿವೆ. ಆದರೆ ತಮ್ಮ ಪುಸ್ತಕಗಳ ಪ್ರಕಾಶನವು ಹಿಂದೀ ಪ್ರಕಾಶಕರಿಂದಲೇ ಆಗಬೇಕೆಂದು ಕಾಂ. ರಾಯು ಇವರ ಇಚ್ಛೆಯಿರುವದರಿಂದ ಇವರು ವಿದೇಶಿ ಕಂಪನಿಗಳಿಗೆ ನಕಾರವನ್ನಿತ್ತಿರುವರು

## ಸಮಾರೋಪ

ಕಾಮ್ರೇಡ ಮಾನವೇಂದ್ರನಾಥರಾಯು ಇವರ ಅಸಾಮಾನ್ಯವಾದ ಜೀವನದ ಬಗ್ಗೆ ಹಾಗೂ ಅದ್ಭುತರಮ್ಯವಾದ ಜೀವನದ ಬಗ್ಗೆ ಎಷ್ಟು ಬರೆದರೂ ಕಡಿಮೆಯೇ ಆಗುವದು. ಅವರು ಈವರೆಗೆ ಪರದೇಶದ ಹಾಗೂ ಹಿಂದುಸ್ಥಾನದಲ್ಲಿ ಮಾಡಿದ ಅಸಾಮಾನ್ಯವಾದ ಕಾರ್ಯಕ್ಕಾಗಿ ಅವರು ಅತುಲವಾದ ಸ್ವಾರ್ಥತ್ಯಾಗವನ್ನು ಮಾಡಿದ್ದು ಅದಕ್ಕಾಗಿ ಅವರು ತಮ್ಮ ಆಯುಷ್ಯದಲ್ಲಿಯ ೪೫ ವರ್ಷಗಳನ್ನು ಕಳೆದಿದ್ದಾರೆ. ಅವರು ಸಾರುತ್ತಿರುವ ಹಿಂದೀ ಸ್ವಾತಂತ್ರ್ಯದ ಹಾಗೂ ಸಾಮ್ಯವಾದದ ಚಳವಳಿಯಲ್ಲಿ ಪ್ರತಿಯೊಬ್ಬ ಹಿಂದೀ ಸ್ತ್ರೀಪುರುಷರು ಭಾಗವಹಿಸಿ ಅವರು ಕೈಕೊಂಡ ಕಾರ್ಯದಲ್ಲಿ ಸಹಭಾಗಿಗಳಾಗುವದರಿಂದಲೇ ಅವರ ಬಗ್ಗೆ ನಿಜವಾದ ಸಹಾನುಭೂತಿಯುದ್ದು ವ್ಯಕ್ತ ಮಾಡಿದಂತಾಗುತ್ತದೆ.

---